# ಭಾರತದ ಸವಿಕಟ್ಟು



ಗ್ರಂಥಕರ್ತ:
**ಹೊಸಕೆರೆ ಶ್ರೀನಿವಾಸಮೂರ್ತಿ**
ವೇದಾಂತಶಿರೋಮಣಿ

ಪರಿಷ್ಕರ್ತ:
ಸಕೆರೆ ಚಿದಂಬರಯ್ಯ



ವಿ. ಎಂ. ವಿ. ಪ್ರೆಸ್, ಬೆಂಗಳೂರು ಸಿಟಿ.

# ಭಾರತದ ಸವಿಕಟ್ಟು



ಗ್ರಂಥಕರ್ತ:

**ಹೊಸಕೆರೆ ಶ್ರೀನಿವಾಸಮೂರ್ತಿ**

ವೇದಾಂತಶಿರೋಮಣಿ



—o—

ಪರಿಷ್ಕರ್ತ :

**ಹೊಸಕೆರೆ ಚಿದಂಬರಯ್ಯ**

———

ಎರಡನೆ ಮುದ್ರಣ ೨,೦೦೦ ಪ್ರತಿಗಳು




ಕ್ರಿ. ೧೯೩೬

ಬೆಲೆ: ೦—೧೨—೦

ಇದರ ಸರ್ವಾಧಿಕಾರವೂ ಗ್ರಂಥಕರ್ತನದು



ಗ್ರಂಥವು ದೊರೆಯುವ ಸ್ಥಲ :

**ಎಂ. ರಾ ಮ ರಾ ವ್,**

ಎಸ್. ಎಸ್. ಎನ್. ಬುಕ್ ಡಿಪೊ,

ನ್ಯೂ ಮಾರ್ಕೆಟ್, — ಬೆಂಗಳೂರು ಸಿಟಿ.





ವಿ. ಎಂ. ವಿ. ಪ್ರೆಸ್,
ಆರ್ಕಾಟ್ ಶ್ರೀನಿವಾಸಾಚಾರ್ಯರ ಬೀದಿ,
ಬೆಂಗಳೂರು ಸಿಟಿ.

# ಮೊದಲನೆ ಮುದ್ರಣದ ಮುನ್ನುಡಿ

ಭಾರತವು ನಮ್ಮ ದೇಶದಲ್ಲಿ ಹಿಂದೆ ನಡೆದ ಕಥೆಯೆಂಬ ಕಾರಣದಿಂದ ಇದರ ಮೇಲೆ ನಮ್ಮವರಿಗೆ ಆದರವು ಬಹಳ. ಇದಲ್ಲದೆ ಮನುಷ್ಯರು ಯಾವ ಯಾವ ಕಾಲದಲ್ಲಿ ಹೇಗೆ ಹೇಗೆ ನಡೆದುಕೊಳ್ಳಬೇಕೆಂಬುದು ಈ ಕಥೆಯಲ್ಲಿ ಕಣ್ಣಿಗೆ ಕಟ್ಟಿದ ಹಾಗೆ ಕಾಣುವದರಿಂದ ಭಾರತವೆಂದರೆ ನಮ್ಮ ಜನರಿಗೆ ಪಂಚಪ್ರಾಣ. ಮಹಾರಾಷ್ಟ್ರದೊಂದು ರಾಜ್ಯವನ್ನೆ ಕಟ್ಟಿದ ಶಿವಾಜಿಯು ಭಾರತವನ್ನು ಕೇಳಿಕೇಳಿಯೇ ಆ ತನ್ನ ಯೋಗ್ಯತೆಯನ್ನು ಮೈಗೂಡಿಸಿಕೊಂಡವನಾದನೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಆದ್ದರಿಂದ ಈ ಭಾರತದ ಕಥೆಯನ್ನು ನಾವು ಎಷ್ಟೆಷ್ಟು ಬಗೆಯಾಗಿಟ್ಟರೂ ಅದರಿಂದ ಅಷ್ಟಷ್ಟು ಗುಣವೆ.

ಭಾರತವೆಂದರೆ ಬಹು ದೊಡ್ಡ ಗ್ರಂಥ. ಆದ್ದರಿಂದ ಅಷ್ಟು ದೊಡ್ಡ ತುತ್ತು ಗಂಟಲಲ್ಲಿಳಿಯುವದು ಎಲ್ಲರಿಗೂ ದಕ್ಕುವ ಮಾತಲ್ಲ. ಆದ್ದರಿಂದ ಅದರದೊಂದು ಸಣ್ಣ ತುತ್ತಾಗುವಂತೆ ಸಂಗ್ರಹಿಸದೆ ಹೋದರೆ ಭಾರತದ ಪ್ರಯೋಜನವು ಸಾಮಾನ್ಯಜನರಿಗೆ ದೂರದ ಮಾತೇ ಸರಿ. ಇನ್ನು ಹಾಗೆ ಸಂಗ್ರಹಿಸುವದರಲ್ಲಿಯೂ ಬರೀ ನೀರಿನಂಥ ಕಥಾಭಾಗವನ್ನೇ ಬೇರೆ ಮಾಡಿದರೂ ಹೆಚ್ಚು ಪ್ರಯೋಜನವಾಗುವದಿಲ್ಲ. ಏಕೆಂದರೆ: ಜನರಿಗೆ ಬರಿಯ ನೀರು ಹೆಚ್ಚು ಕುಡಿಯಬೇಕೆನಿಸುವದಿಲ್ಲ. ಆ ನೀರಿಗೆ ಹೂಗಳ ರಸ, ಹಣ್ಣುಗಳ ರಸ, ಸಕ್ಕರೆ, ಯಾಲಕ್ಕಿ, ಕೇಸರಿ– ಮೊದಲಾದ ಮಧುರದ್ರವ್ಯಗಳ ಮತ್ತು ಸುವಾಸನಾದ್ರವ್ಯಗಳ ಸಮ್ಮೇಳನದ ಘನೀಭೂತಪಾಕ(ಷರಬತ್)ವನ್ನು ಕೂಡಿಸಿದರೆ ಆ ನೀರು ಮತ್ತಷ್ಟು ಬೇಕೆನಿಸಿ ಜನರ ಹೃದಯದೊಳಕ್ಕೆ ಅದು ಸಮೃದ್ಧಿಯಾಗಿ

ಪ್ರವೇಶಿಸುವಂತೆ ಭಾರತದ ಕಥೆಗೂ ಅಲ್ಲಲ್ಲಿಗೆ ತಕ್ಕ ಹಾಗೆ ಮಾತಿನ ಸೊಗಸುಗಳಿದ್ದ ಹೊರತು ಅದು ಹೆಚ್ಚು ಮೆಚ್ಚಿಕೆಗೆ ಪಾತ್ರವಾಗುವ ಸಂಭವವು ಕಡಿಮೆ. ಈ ಕೆಲಸವನ್ನು ನನ್ನ ಅಲ್ಪಬುದ್ಧಿಯಿಂದ ಮಾಡು ವದಕ್ಕಿಂತಲೂ ಸಂಸ್ಕೃತದಲ್ಲಿ **ಶ್ರೀಮದನಂತಕವಿವಿರಚಿತಚಂಪೂಕಾವ್ಯ** ವನ್ನು ಕನ್ನಡಿಸುವದು ಯೋಗ್ಯವೆಂದು ನನಗೆ ತೋರಿತು. ಆದ್ದರಿಂದ ಈ ಕೆಲಸಕ್ಕೆ ನಾನು ಕೈ ಹಾಕಿದೆನು. ಚಂಪೂಕಾರನ ಉದ್ದೇಶವು ಬರೀ ಕಥೆಯನ್ನು ತಿಳಿಸುವದಾಗಿರದೆ ಮುಖ್ಯ ಮುಖ್ಯ ವಿಷಯಗಳಿಂದ ಮನ ಸ್ಸಿನ ಮೇಲೊಂದು ಬಗೆಯ ಸಂಸ್ಕಾರವನ್ನು ಒಡಮೂಡಿಸುವಂಥ ಮಹತ್ಕಾರ್ಯವನ್ನು ಮಾಡುವದಾಗಿರುವದರಿಂದ ಅದರ ಈ ಅನು ವಾದವು ಕನ್ನಡಿಗರಿಗೆ ಹೆಚ್ಚು ಉಪಯೋಗಕರವಾದೀತೆಂದು ನೆನೆಸಿರು ತ್ತೇನೆ.

ಗದ್ಯಪದ್ಯಮಯವಾಗಿರುವ ಚಂಪೂಕಾವ್ಯವನ್ನು ಅದೇ ಮಾದ ರಿಯ ಗದ್ಯಪದ್ಯಮಯವಾಗಿರುವ ಚಂಪುವಾಗಿ ಕನ್ನಡಿಸುವದು ನನಗೆ ನಿಲುಕದ ಮಾತೆಂದು ನಾನು ಒಪ್ಪಿಕೊಳ್ಳುವೆನಾದರೂ ಹಾಗೆ ಮಾಡದೆ ಇರುವದಕ್ಕೆ ಅದೊಂದೇ ಕಾರಣವೇ ಅಲ್ಲ. ಮತ್ತೇನೆಂದರೆ: ಯಾವ ದುರ್ಯೋಗದಿಂದಲೋ ಏನೋ ನಮ್ಮಲ್ಲಿ ಈಚೆಗೆ ಪದ್ಯಗಳ ವಾಚನವು ಬಹಳ ಕಡಿಮೆಯಾಗಿದೆ. ನಿಜವಾಗಿ ನೋಡಿದರೆ ನಮ್ಮ ಜನಗಳೆಲ್ಲ ಸ್ವಭಾವವಾಗಿ ಪದ್ಯಪ್ರಿಯರು. ಇಂಥವರ ವಂಶದವರಾದ ನಮಗೆ ಪದ್ಯದ ರುಚಿಯು ಕೈಬಿಟ್ಟುಹೋಗಿರುವದು ನಮ್ಮ ಅವನತಿಯೆಂದೇ ನಾವು ಒಪ್ಪಿಕೊಳ್ಳಬೇಕು. ಪದ್ಯದ ರುಚಿಯು ಕೈಬಿಟ್ಟುಹೋದರೂ ಗದ್ಯದ ರುಚಿಯಾದರೂ ಇನ್ನೂ ಅಷ್ಟಿಷ್ಟು ಉಳಿದುಕೊಂಡಿರುವದರಿಂದ ಅದೇ ನಮ್ಮ ಸುದೈವವೆಂದು ತಿಳಿದು ನಾನು ಇಲ್ಲಿ ಚಂಪೂಭಾರತ ವನ್ನು ವಚನರೂಪಕ್ಕೆ ಇಳಿಸಿರುವೆನು. ಮಾತಿಗೆ ಮಾತಿಟ್ಟು ಭಾಷಾಂತ ರಿಸಿದರೆ ಭಾಷಾಂತರದ ವಾಸನೆಯಿಂದ ಕೂಡಿ ಅದು ಸವಿಕಟ್ಟಾಗಲಾರ ದೆಂದು ತೋರಿತು. ಆದ್ದರಿಂದ ನಾನು ಅರ್ಥವನ್ನು ಕನ್ನಡಿಸುವದು

ಮುಖ್ಯವೆಂದಿಟ್ಟುಕೊಂಡು ಆ ಅರ್ಥವನ್ನು ಮೊದಲು ನಾನು ಅರಗಿಸಿಕೊಂಡು ಅದು ಕನ್ನಡಿಗರಿಗೆ ಸವಿಯಾಗುವ ಹಾಗೆ ಚಿಕ್ಕ ಚಿಕ್ಕ ವಾಕ್ಯಗಳ ಪಡಿಯಚ್ಚಿನಲ್ಲಿ ಎರಕವನ್ನು ಹೊಯ್ದಿರುವೆನು. ಮೂಲದಲ್ಲಿದ್ದ ಸಂಸ್ಕೃತಶಬ್ದಗಳ ನಾನಾರ್ಥದಿಂದ ತೋರುವ ಚಮತ್ಕಾರಗಳೆಲ್ಲ ಕನ್ನಡಕ್ಕೆ ಹೊರಲಾರದ ಹೊರೆಯಾಗುವವೆಂದು ಅವುಗಳನ್ನು ಅಲ್ಲಲ್ಲಿಯೇ ಕೈಬಿಟ್ಟಿರುತ್ತೇನೆ.

ಒಟ್ಟಿನ ಮೇಲೆ ನಾನು ಕನ್ನಡಿಸಿರುವ ಈ ಗ್ರಂಥವು ಭಾರತದ ಸವಿಯ ಕಟ್ಟಾಗಿ ಎಂದರೆ ಬೇಳೆಯ ಕಟ್ಟಿನಂತೆ ಸುಪಕ್ವವಾದ ಸಾರವಾಗಿ ಅಥವಾ ರುಚಿಕರವಾದ ರಚನೆಯುಳ್ಳದ್ದಾಗಿರುವದು. ಇದರಲ್ಲಿ ನಾನು ವಿಷಯವಿಭಾಗಗಳನ್ನು ಮಾಡಿ ಅಲ್ಲಲ್ಲಿ ಆ ವಿಷಯದ ಹೆಸರನ್ನು ದೊಡ್ಡ ಅಕ್ಷರದಲ್ಲಿ ತೋರಿಸಿರುವೆನು. ನಾನು ಸಂಸ್ಕೃತ ಭಾಷೆಯೆಂಬ ಪಾತ್ರೆಯಿಂದ ಅದರಲ್ಲಿದ್ದ ಪಕ್ವಾನ್ನವನ್ನು ಕನ್ನಡವೆಂಬ ಪಾತ್ರೆಗೆ ತೋಡಿಕೊಳ್ಳುವಾಗ ಮುಖ್ಯರಸಪದಾರ್ಥಗಳೇನಾದರೂ ನನ್ನ ಲೇಖಿನಿಯೆಂಬ ಸೌಟಿನಿಂದಿಳಿದು ಬರದೆ ಉಳಿದುಕೊಂಡಿದ್ದರೆ ಅಥವಾ ಆ ರಸಪದಾರ್ಥಗಳಿಗೆ ನನ್ನ ಲೇಖಿನಿಯ ಕಿಲಬು ತಾಕಿ ರುಚಿಗೆಟ್ಟಿದ್ದರೆ ಅದು ನನ್ನ ಪ್ರಥಮಪ್ರಯತ್ನವೆಂಬ ಕನಿಕರದಿಂದ ಅಭಿಜ್ಞರು ದಯವಿಟ್ಟು ಕ್ಷಮಿಸುವದಲ್ಲದೆ ಅಗತ್ಯವಾಗಿ ನನಗೆ ಸೂಚಿಸಿದರೆ ಅವುಗಳನ್ನೆಲ್ಲ ಕೃತಜ್ಞತಾಪೂರ್ವಕವಾಗಿ ಮುಂದೆ ತಿದ್ದಿಕೊಳ್ಳುತ್ತೇನೆ.

ಕನ್ನಡದಲ್ಲಿ ಬರೆಯುವವಕ್ಕೆ ಹೊರಟ ಗ್ರಂಥದಲ್ಲಿ ಸಂಸ್ಕೃತ ಶಬ್ದಗಳ ಮೆರವಣಿಗೆ ಇರಬಾರದೆಂಬುದನ್ನು ಮನಸ್ಸಿನಲ್ಲಿಟ್ಟುಕೊಂಡು ಸಂಸ್ಕೃತಶಬ್ದಗಳಿಗೆ ಕೊಡತಕ್ಕಷ್ಟು ಗೌರವವನ್ನೂ ಕೊಟ್ಟು ಇದು ಮುಖ್ಯವಾಗಿ ಕನ್ನಡದ ಮಾತಿನ ಬಿನ್ನಾಣಗಳಿಗೆ ತೌರುಮನೆಯಾದ ಮೇಲುಪಜ್ಜಿಯಾಗಿ ಎದ್ದು ಕಾಣುವಂತೆ ಮೆರುಗನ್ನು ಕೊಡುವ ಪ್ರಯತ್ನದಲ್ಲಿ ನಮ್ಮ ತೀರ್ಥರೂಪರವರಾದ **ಹೊಸಕೇರಿ ಚಿದಂಬರಯ್ಯ**ನವರ ನೆರವನ್ನು ಕೊನೆಯವರೆಗೂ ಉಪಯೋಗ

ಮಾಡಿಕೊಂಡಿರುತ್ತೇನೆ. ಎಂಥ ಹೇಡಿಯನ್ನಾದರೂ ತನ್ನ ಎದೆಯ ಕೆಚ್ಚನ್ನು ಮೆರೆಸುವಂತೆ ಸಮಯಕ್ಕೆ ತಕ್ಕ ಮಾತಿನಿಂದ ಹುರಿದುಂಬಿಸುವ ಈ ಸವಿಕಟ್ಟು ವಾಚಕರ ನಾಲಿಗೆಯಲ್ಲಿ ನೀರು ಕರೆಸಿದರೆ ಅದನ್ನು ನೋಡಿ ಉತ್ಸಾಹಗೊಂಡು ಈ ಬಗೆಯ ಪ್ರಯತ್ನವನ್ನು ಇನ್ನೂ ಮುಂದುವರಿಸಬೇಕೆಂದಿದ್ದೇನೆ.

ಬೆಂಗಳೂರು<br>ಶುಕ್ಲ<br>ಕ್ರಿ. ೧೯೨೯ } **ಶ್ರೀನಿವಾಸಮೂರ್ತಿ**

# ಎರಡನೆ ಮುದ್ರಣದ ಮುನ್ನುಡಿ

ಇದು ಹೊರಬೀಳುತ್ತಲೆ ಅನೇಕ ಪತ್ರಕರ್ತರು ಇದನ್ನು ಬಾಯ ತುಂಬ ಹೊಗಳಿ ನನಗೆ ಬೆಂಬಲವನ್ನು ಕೊಟ್ಟರು. ವಾಚಕರೂ ತಕ್ಕಷ್ಟು ಆದರದಿಂದ ಇದಕ್ಕೆ ಕೈ ನೀಡಿದರು. ಇದರ ಜೊತೆಗೆ ಮುಖ್ಯವಾಗಿ ಸರಕಾರದವರು ಇದನ್ನು ಗ್ರಂಥಭಂಡಾರಗಳಿಗೆ ತಕ್ಕದ್ದಾಗಿಯೂ ಮತ್ತು ಹೈಸ್ಕೂಲುಗಳ V ಫಾರಮಿನ ಪಠ್ಯಪುಸ್ತಕವಾಗಿಯೂ ಸಂಭಾವಿಸಿ ಇದರ ಹಣೆಗೆ ಕುಂಕುಮದ ಬಟ್ಟನ್ನಿಟ್ಟದ್ದರಿಂದ ಇದು ಈಗ ನಗೆಮೊಗದಿಂದ ಮತ್ತೆ ತಲೆ ಎತ್ತಿರುವದು. ಈ ಗ್ರಂಥವನ್ನಗಲಿಸುತ್ತಲೆ ಮನೋಹರವಾಗಿ ಎದ್ದು ಕಾಣುವ '**ಪಾಂಡವರ ಮೆರವಣಿಗೆ**'ಯ ಚಿತ್ರವನ್ನು ನನ್ನ ಅಭಿಪ್ರಾಯದಂತೆ ರೂಪಿಸುವದರಲ್ಲಿ ಚಿತ್ರಕಲಾಭಿಜ್ಞರಾದ ಶ್ರೀಯುತ **ಅನಂತಕೃಷ್ಣ ಶರ್ಮರು** ತೋರಿಸಿರುವ ಉತ್ಸಾಹಾತಿಶಯವು ಅಭಿನಂದನೀಯವಾಗಿದೆ.

ದಾವಣಗೆರೆ<br>ಧಾತು, ಕ್ರಿ. ೧೯೩೬ } **ಶ್ರೀನಿವಾಸಮೂರ್ತಿ**<br>ವೇದಾಂತಶಿರೋಮಣಿ<br>ಗೌರ್ನಮೆಂಟ್ ಹೈಸ್ಕೂಲು ಸಂಸ್ಕೃತಪಂಡಿತ,<br>ದಾವಣಗೆರೆ.

# ವಿಷಯಕ್ರಮ



॥ ಶ್ರೀ ಕೃಷ್ಣಾಯ ನಮಃ ॥

# ಭಾರತದ ಸವಿಕಟ್ಟು



## ಹಸ್ತಿನಾವತಿಯ ವರ್ಣನೆ

ನಮ್ಮ ಭರತಖಂಡದಲ್ಲಿ ಈಗ ಆಂಗ್ಲರಾಜಪ್ರತಿನಿಧಿಯ ರಾಜಧಾನಿಯಾಗಿ ದೆಹಲಿಯೆಂಬ ಪಟ್ಟಣವು ಪ್ರಸಿದ್ಧವಾಗಿದೆಯಷ್ಟೆ. ಇದಕ್ಕೆ ಪುರಾಣಕಾಲದಲ್ಲಿ ಹಸ್ತಿನಾವತಿಯೆಂದು ಹೆಸರಿತ್ತು. ಆಗ ಇದು ಚಂದ್ರವಂಶದಲ್ಲಿ ಪ್ರಸಿದ್ಧರಾದ ಕೌರವರ ರಾಜಧಾನಿ. ಆ ಕೌರವರು ಚಂದ್ರವಂಶದ ತೋರಮುತ್ತಿನಂತಿದ್ದರು. ಅವರ ಬಾಹುಗಳು ನೀಳವಾಗಿ ಶೌರ್ಯದಿಂದ ತುಂಬಿಕೊಂಡಿದ್ದವು.

ಅವರ ಕಾಲದಲ್ಲಿ ಹಸ್ತಿನಾವತಿಯಲ್ಲಿ ಎಲ್ಲೆಲ್ಲಿಯೂ ಎತ್ತರವಾದ ದೊಡ್ಡ ದೊಡ್ಡ ಮಹಡಿಯ ಮನೆಗಳೇ ಕಿಕ್ಕಿರಿದಿದ್ದವು. ಆ ಮನೆಗಳ ಗೋಡೆಗಳಿಗೆ ಕೆತ್ತಿದ್ದ ನವರತ್ನಗಳ ಹೊಳಪು ಊರ ತುಂಬ ಝುಗಝುಗಾಯಮಾನವಾಗಿ ಬೆಳಗುತ್ತಿತ್ತು. ಅಲ್ಲಿಯ ಸ್ತ್ರೀಯರು ತಮ್ಮ ತೊಡೆಗಳ ಮೇಲೆ ವೀಣೆಗಳನ್ನಿಟ್ಟುಕೊಂಡು ಮೃದುಮಧುರಸ್ವರದಿಂದ ಹಾಡುವಾಗ ಅದರಿಂದ ಆಗುತ್ತಿದ್ದ ರಸಾವಿರ್ಭಾವದಿಂದ ವೀಣೆಯ ದಂಡವು ಚಿಗುರುತ್ತಿತ್ತೆಂದು ಆ ಕಾಲದ ಕವಿಗಳು ವರ್ಣಿಸುವಷ್ಟು ಆಗ ಗಾನ ಪ್ರತಿಭೆಯು ಬೆಳೆದಿತ್ತು. ಹಿಂದೆ ಆ ಪಟ್ಟಣದಲ್ಲಿ ದುರ್ಯೋಧನನು ಆಳು

ತ್ತಿದ್ದಾಗ ಅವನ ಏನೋ ಒಂದು ತಪ್ಪಿಗಾಗಿ ಸಿಟ್ಟಿಗೆದ್ದ ಬಲರಾಮನು ತನ್ನ ಆಯುಧವಾದ ನೇಗಿಲಿನಿಂದ ಕ್ಷಣಮಾತ್ರದಲ್ಲಿ ಆ ಪಟ್ಟಣವನ್ನೇ ಎಬ್ಬಿಬಿಟ್ಟನೆಂದು ಜನರು ಹೇಳುತ್ತಾರೆ. ಈ ಮಾತು ಒಪ್ಪುವಂತೆ ಈಗಲೂ ಆ ಪಟ್ಟಣವು ಒಂದು ಕಡೆ ಎದ್ದಿರುವದು.

## ಪಾಂಡುರಾಜನಿಗೆ ಶಾಪವು ಬಂದದ್ದು

ಆ ಹಸ್ತಿನಾವತಿಯೆಂಬ ಪಟ್ಟಣವನ್ನು "ಪಾಂಡು" ಎಂಬ ರಾಜನು ಆಳುತ್ತಿದ್ದನು. ಅವನು ಒಳ್ಳೆ ಪರಾಕ್ರಮಿ. ಜನರೆಲ್ಲರಿಗೂ ಅವನನ್ನು ಕಂಡರೆ ಬಹಳ ಪ್ರೀತಿ. ಎದುರುಬಿದ್ದ ರಾಜರ ಧನಧಾನ್ಯಗಳನ್ನೆಲ್ಲ ಬಾಚಿ ಬಳಿದುಕೊಳ್ಳುವದರಲ್ಲಿ ಪಾಂಡುರಾಜನು ಒಳ್ಳೆ ಹೆಸರುಗೊಂಡಿದ್ದನು. ಅವನಿಗೆ ಭೂದೇವಿಯ ಜೊತೆಗೆ ಇನ್ನಿಬ್ಬರು ಹೆಂಡಿರು: ಒಬ್ಬಳು ಕುಂತಿ; ಇನ್ನೊಬ್ಬಳು ಮಾದ್ರಿ.

ಒಮ್ಮೆ ಅವನಿಗೆ ಬೇಟೆಯಾಡಬೇಕೆನಿಸಿತು. ಅವನು ಆ ಸನ್ನಾಹವನ್ನು ಮಾಡುತ್ತಲೆ ಬೇಟೆಯ ನಾಯಿಗಳು ಮುಂದೆ ನಿಂತವು. ಅವು ಬೆಳದಿಂಗಳಂತೆ ಬೆಳ್ಳಗೆ ಹೊಳೆಯುತ್ತಿದ್ದವು. ಅವು ಓಡುವದಕ್ಕೆ ಆರಂಭಿಸಿದರೆ ಅವನ್ನು ಹಿಂಬಾಲಿಸುವದು ಗಾಳಿಗೂ ಆಗುತ್ತಿರಲಿಲ್ಲ. ಬಲೆ ಮೊದಲಾದವುಗಳನ್ನು ತೆಗೆದುಕೊಂಡು ಬೇಡರೂ ಸಿದ್ಧರಾದರು. ಆ ಸಮಯದಲ್ಲಿ ವಿನೋದವನ್ನು ನೋಡುವ ಕುತೂಹಲದಿಂದ ಕುಂತೀ ಮಾದ್ರಿಯರೂ ಅವನನ್ನು ಹಿಂಬಾಲಿಸಿ ಹೊರಟರು. ಎಲ್ಲರೂ ಹಿಮವತ್ಪರ್ವತಕ್ಕೆ ಬಂದರು. ಅಲ್ಲಿ ಪಾಂಡುರಾಜನು ಕಾಡುಮಲ್ಲಿಗೆಯ ಹೂಗಳನ್ನು ಜುಟ್ಟಿಗೆ ಮುಡಿದುಕೊಂಡು ಕಾಶಿಯನ್ನು ಬಿಗಿದುಟ್ಟು ಅದಕ್ಕೆ ಆಯುಧವನ್ನು ಸೆಕ್ಕಿಕೊಂಡು ಹೆಗಲ ತುಂಬ ಬತ್ತಳಿಕೆಯನ್ನು ಹೇರಿಕೊಂಡು ಬಲವಾದ ಬಿಲ್ಲನ್ನು ಕಯ್ಯಲ್ಲಿ ಹಿಡಿದು ಮೃಗಗಳ ಮೇಲೆ ತನ್ನ ಶೌರ್ಯವನ್ನು ತೋರಿಸುವ ಸಿದ್ಧತೆಯನ್ನು ಮಾಡಿದನು. ಅವನ ಸಮೀಪ

ದಲ್ಲಿಯೇ ಇದ್ದ ಸುಂದರಿಯರಾದ ಕುಂತೀಮಾದ್ರಿಯರನ್ನು ನೋಡಿ ಅವರ ಕಣ್ಣುಗಳು ತಮ್ಮ ಕಣ್ಣುಗಳಂತೆ ಇರುವದನ್ನು ಕಂಡು ಬೆರಗಾಗಿ ತಮ್ಮ ಜಾತ್ಯಭಿಮಾನದಿಂದ ಬಂದವೆಂಬಂತೆ ಜಿಂಕೆಗಳ ಹಿಂಡುಹಿಂಡುಗಳೇ ಮುಂದೆ ಬಂದವು. ತಮ್ಮ ವಂಶದ ಮೂಲಪುರುಷನಾದ ಚಂದ್ರನ ನಡುವೆ ಸೇರಿ ಅವನ ರೂಪವನ್ನು ಅಂದಗೆಡಿಸುವವೆಂಬ ರೋಷದಿಂದ ಆ ರಾಜನು ಆ ಜಿಂಕೆಗಳಿಗೆ ತಕ್ಕ ಶಿಕ್ಷೆಯನ್ನು ಮಾಡಿದನು. ಅಲ್ಲಲ್ಲಿ ಬಿದ್ದಿದ್ದ ಮುಳ್ಳಿನಂಥ ರೋಮಗಳು ಆ ಕಾಲಿಡುವದಕ್ಕಾಗದ ಕಾಡಿನಲ್ಲಿ ಕಾಡುಹಂದಿಗಳ ವಾಸಸ್ಥಲವಾದ ದಾರಿಯನ್ನು ತೋರಿಸುತ್ತಿದ್ದವು. ಕುದುರೆಗಳೆಂದರೆ ಮೈಮೇಲೇರಿ ಬರುವ ಸ್ವಭಾವದ ಆ ಕಾಡುಹಂದಿಗಳು ಪಾಂಡುರಾಜನ ಕುದುರೆ ಕೆನೆಯುವದನ್ನು ಕೇಳುತ್ತಲೆ ಕೆಸರಿನ ಗುಂಡಿಯಿಂದ ಎದ್ದು ತಮ್ಮ ಮೈಯನ್ನು ಕೊಡವಿಕೊಳ್ಳುತ್ತ ತಾವಾಗಿ ಎದುರಿಗೆ ಬಂದು ಬಲಿಯಾದವು.

ಕುದುರೆಯು ಬೇರೊಂದು ಕಡೆಗೆ ಓಡಿದಾಗ ಕಾಡುಕೋಣಗಳು ಕಾಣಿಸಿಕೊಂಡವು. ಮುಂಗಡೆಯಲ್ಲಿ ಸುಳಿದಾಡುವ ಸುಂಡಿಲು ಇಲ್ಲದ್ದರಿಂದ ಮಾತ್ರ ಆನೆಯಲ್ಲವೆಂದು ತಿಳಿಯುವಂತಿದ್ದ ಅವುಗಳನ್ನು ಆ ರಾಜನು ಸಾಲಾಗಿ ನೆಲಕ್ಕೊರಗಿಸಿದನು. ಕುದುರೆಗಳ ಮೇಲೆ ಸ್ವಭಾವವಾಗಿ ಹಗೆತನವಿರುವ ಆ ಕಾಡುಕೋಣಗಳು ಕೆಲವು ಕಡೆ ಪಾಂಡುರಾಜನ ಕುದುರೆ ಕೆನೆಯುವದನ್ನು ಕೇಳಿ ತಡೆಯಲಾರದೆ ಸಿಟ್ಟುಗೊಂಡು ತಮ್ಮ ಕೋಡುಗಳನ್ನು ಸುತ್ತಲೂ ತಿರುಗಿಸಿ ಸಮೀಪದ ಮರಗಳನ್ನು ಕಿತ್ತು ಎತ್ತಹೋದಾಗ ಆ ಕೋಡುಗಳು ಹಣೆಯವರೆಗೂ ನೆಲದೊಳಕ್ಕೆ ಹುಗಿದುಹೋದದ್ದರಿಂದ ಆಮೇಲೆ ಅವುಗಳನ್ನು ಹಿಂದಕ್ಕೆ ತೆಗೆದುಕೊಳ್ಳಲಾರದೆ ಒದ್ದಾಡುತ್ತಿದ್ದವು. ರಾಜನು ಅವುಗಳ ಆ ಸಾಹಸವನ್ನು ನೋಡಿ ಅವಕ್ಕೆ ತಕ್ಕ ಸ್ಥಲವನ್ನು ಕೊಡಬೇಕೆಂದು ಅವುಗಳ ಕುಲಪತಿಯಾಗಿರುವ ಯಮುನ ವಾಹನವಿರುವೆಡೆಗೆ ಅವುಗಳನ್ನು ಕಳುಹಿಸಿದನು. ಹೀಗೆ ಅವನು ಹುಲಿ ಮೊದಲಾದ ಎಷ್ಟೋ ಘಾತಕಪ್ರಾಣಿಗಳ ಹುಟ್ಟು

ಗೊಳಿಸಿ ಆ ಹಿಮವತ್ಪರ್ವತದ ಗುಹೆಗಳಲ್ಲಿ ಅಡಗಿಕೊಂಡಿರುವ ಸಿಂಹ ಗಳನ್ನು ಎಬ್ಬಿಸತೊಡಗಿದನು. ಅವನ ಧನುಷ್ಟಂಕಾರವನ್ನು ಕೇಳಿ ಹೊರಬಿದ್ದ ಸಿಂಹಗಳೂ ಬೇಟೆಗೆ ಆಹುತಿಯಾದವು. ಹೀಗೆ ನಡೆದ ಎಡೆಬಿಡದ ಬೇಟೆಯಿಂದ ಪಾಂಡುರಾಜನು ಬಲು ಬಳಲಿದನು. ಅವನ ಹಣೆಯಲ್ಲಿ ಬೆವರ ಹನಿಗಳು ಗುಂಪುಗುಂಪಾಗಿ ತುಂಬಿಕೊಂಡವು.

ಆಗ ಹಿಮಾಲಯದಲ್ಲಿ ಹುಟ್ಟಿ ಮೆಲ್ಲಮೆಲ್ಲಗೆ ಮಾನಸಸರೋವರದ ಹೂಗಳಮೇಲೆ ಹಾದುಬಂದ ಒಳ್ಳೆ ಸುವಾಸನೆಯುಳ್ಳ ಗಾಳಿಯು ಅವನ ಮೇಲೆ ಬೀಸಿತು. ಆಮೇಲೆ ಅವನು ಬೇಟೆಯನ್ನು ನಿಲ್ಲಿಸಬೇಕೆಂದಿರುವ ಭರದಲ್ಲಿ ಓಡುತ್ತಿರುವ ಒಂದು ಜಿಂಕೆಯನ್ನು ನೋಡಿ ಅದನ್ನು ಹಿಂಬಾಲಿಸಿದನು. ಅವನ ಸೇನೆಯವರು ಅವನಷ್ಟು ವೇಗವಾಗಿ ಬರಲಾರದೆ ಹೋದರು. ಅವನು ಎಷ್ಟೋ ದೂರ ಹೋದ ಮೇಲೆ ಅಲ್ಲೊಂದು ಒಂದು ಪೊದರಿನಲ್ಲಿ ಎರಡು ಜಿಂಕೆಗಳು ಕಾಣಬಂದವು. ಅವು ಚೆನ್ನಾಗಿ ಬೆಳೆದು ತುಂಬಿದ ಮೈಯುಳ್ಳವುಗಳಾಗಿ ದಾಂಪತ್ಯ ಸುಖವನ್ನನುಭವಿಸುತ್ತಿದ್ದವು. ಪಾಂಡುರಾಜನು ಹಿಂದುಮುಂದು ನೋಡದೆ ಒಡನೆ ತನ್ನದೊಂದು ಚೂಪಾದ ಬಾಣವನ್ನು ಗಂಡುಜಿಂಕೆಗೆ ಗುರಿಯಿಟ್ಟು ಬಿಟ್ಟನು. ಆ ನಿಮಿಷದಲ್ಲಿಯೇ ಅದರ ಆಯುಸ್ಸು ಅಳಿಸಿ ಹೋಯಿತು. ಆದರೆ ಬಾಣದ ಪೆಟ್ಟಿನಿಂದ ಆ ಮೃಗವು "ಕಿಂದಮ" ನೆಂಬ ಹೆಸರಿನ ಮಹರ್ಷಿಯ ಸ್ವರೂಪವನ್ನು ತೆಗೆದುಕೊಂಡಿತು.

ಕಿಂದಮನ ಮೈಯಿಂದ ರಕ್ತವು ದಡದಡನೆ ಹರಿಯುತ್ತಿತ್ತು. ಸೂರ್ಯನಂತೆ ಹೊಳೆಯುತ್ತಿದ್ದ ಆ ಋಷಿಯು ಕೋಪಗೊಂಡು "ನಿನ್ನ ಭಾಗಕ್ಕೆ ಸ್ತ್ರೀಯರಿಂದ ದೊರೆಯುವ ಸುಖವು ದೂರವಾಗಲಿ"- ಎಂದು ಪಾಂಡುರಾಜನಿಗೆ ಶಾಪವನ್ನು ಕೊಟ್ಟನು. ಇದು ಕಿವಿಗೆ ಬೀಳುತ್ತಲೆ ಪಾಂಡುರಾಜನಿಗೆ ವಜ್ರಾಯುಧವು ಬಡಿದಂತಾಯಿತು. ಆಗ ಅವನ ಮನಸ್ಸಿಗೆ ಬಹಳ ಕೊರತೆಯುಂಟಾಗಿ ಅವನು ತನ್ನ ಸೇನೆ, ದೇಶ, ಕೋಶ-ಮೊದಲಾದೆಲ್ಲವನ್ನೂ ಪರಿತ್ಯಾಗಮಾಡಿದನು. ಅಂದಿನಿಂದ ಅವನು

ಅಲ್ಲಿಯೇ ಯೋಗಾಭ್ಯಾಸವನ್ನು ಕೈಗೊಂಡನು. ಗೆಡ್ಡೆಗೆಣಸುಗಳೇ ಅವನ ಷಡ್ರಸಾಹಾರವಾಗಿದ್ದವು. ನಟ್ಟಡವಿಯೇ ಅವನ ವಿಹಾರಗೃಹ ವಾಯಿತು. ದರ್ಭೆಯೇ ಅವನ ಸಿಂಹಾಸನವಾಗಿ ಕಂಗೊಳಿಸಿತು.

## ಕುಂತಿಗೆ ವರಪ್ರಾಪ್ತಿ

ಇದುವರೆಗೆ ಪಾಂಡುರಾಜನು ಅಂತಃಪುರದ ಸ್ತ್ರೀಯರ ಪ್ರೇಮ ಪಾಶಕ್ಕೊಳಗಾಗಿದ್ದನು. ಆದರೆ ಈಚೀಚಿನ ರಾತ್ರಿಗಳೆಲ್ಲ ಆ ಹಗ್ಗ ಗಳನ್ನು ಕತ್ತರಿಸುವ ಈಳಿಗೆಯಂತಿದ್ದವು. ಇದರ ಜೊತೆಗೆ ಅವನಿಗೆ ಮಕ್ಕಳಿಲ್ಲದ್ದೊಂದು ದೊಡ್ಡ ಯೋಚನೆ ಇತ್ತು. ಒಂದು ದಿನ ಅವನು ಏಕಾಂತದಲ್ಲಿ ತನ್ನ ಹೆಂಡತಿಯಾದ ಕುಂತಿಯ ಮುಂದೆ ತನ್ನ ಮನಸ್ಸನ್ನು ಬಿಚ್ಚಿ ಹೇಳಿದ್ದೇನೆಂದರೆ:—

" ನನಗೆ ಏಕಚ್ಛತ್ರಾಧಿಪತ್ಯವಿದ್ದರೂ ಮಕ್ಕಳಿಲ್ಲದ್ದರಿಂದ ಅದು ಶೋಭಿಸುವದಿಲ್ಲ. ನಮ್ಮ ವಂಶಕ್ಕೆ ನಾನೇ ಕೊನೆಯವನೆಂಬ ದೂರಿಗೆ ಗುರಿಯಾದೆನಲ್ಲ ! ಮಕ್ಕಳಿಲ್ಲದವರು ಯಾವ ಕರ್ಮಗಳನ್ನು ಮಾಡಿದಗೂ ಸ್ವರ್ಗವು ದೊರೆಯುವದಿಲ್ಲವೆಂಬ ಮಾತು ನನ್ನ ಮರ್ಮಗಳನ್ನು ಚುಚ್ಚು ತ್ತಿದೆ. ಮಗುವು ಮುದ್ದಾಗಿ ಹತ್ತಿರಕ್ಕೆ ಬಂದಾಗ 'ನಿನಗೆ ನಾನು ಹೆಚ್ಚೋ ತಾಯಿ ಹೆಚ್ಚೋ?" ಎಂದು ಅದನ್ನು ಕೇಳಿದರೆ ಅದು ತೊದಲು ಮಾತಿನಿಂದ ಕೊಡುವ ಉತ್ತರವನ್ನು ಕೇಳುತ್ತ ಧನ್ಯನಾದೆನೆಂಮು ಅದರ ತಲೆಯನ್ನು ಮೂಸಿನೋಡುವ ಸುಯೋಗವು ನನಗಿಲ್ಲವಲ್ಲ! ಮಕ್ಕಳಿಲ್ಲದ ನನ್ನ ದೆಸೆಯಿಂದ ಪಿಂಡೋದಕಗಳಿಲ್ಲದೆ ಪಿತೃಗಳೆಲ್ಲರೂ ದುಃಖಗೊಂಡು ನನ್ನನ್ನು ಹಣ್ಣುಗಳಿಲ್ಲದ ಮರವನ್ನು ದಾರಿಹೋಕರು ನಿಂದಿಸುವಂತೆ ನಿಂದಿಸುತ್ತಾರೆ. ಕಿಂದಮುಋುಷಿಯ ಶಾಪಕ್ಕೆ ಗುರಿಯಾದ ನನಗೆ ಐಶ್ವರ್ಯ, ಕೀರ್ತಿ, ರಾಜ್ಯ— ಮೊದಲಾದದ್ದೇನಿದ್ದರೇನು ? ಈ ನನ್ನ ದುಃಖಕ್ಕೆ ಪರಿಹಾರವಾಗಿ ನೀನು ನಿರ್ದೋಷವಾದ ನಿಯಮಗಳಿಂದ ಸಂತತಿಯನ್ನು ಪಡೆದರೆ ನನಗೆ ಸಂತೋಷವಾಗುವದು."

ಹೀಗೆ ಕಣ್ಣೀರು ಸುರಿಸಿದ ಗಂಡನನ್ನು ನೋಡಿ ಅವನಿಗೆ ಸಮಾಧಾನವನ್ನುಂಟುಮಾಡುವದಕ್ಕಾಗಿ ಸ್ವಲ್ಪಮಟ್ಟಿಗೆ ನಾಚಿಕೆಯಿಂದಲೂ ಕೂಡಿದವಳಾಗಿ ಕುಂತಿಯು ಹೇಳಿದ್ದೇನೆಂದರೆ:–"ನಾನು ಬಹಳ ಹಿಂದೆ ಇನ್ನೂ ಸಣ್ಣ ಹುಡುಗಿಯಾಗಿ ತಂದೆಯ ಮನೆಯಲ್ಲಿದ್ದಾಗ ಆ ನಮ್ಮ ತಂದೆಯಾದ ಕುಂತಿಭೋಜನ ಮನೆಗೆ ದೂರ್ವಾಸಮಹರ್ಷಿಗಳು ಬಂದರು. ಅವರು ಬ್ರಹ್ಮನಿಗೆ ಸಮಾನರಾದವರು. ಉಗ್ರವಾದ ತಪಶ್ಚರ್ಯೆಯಿಂದ ಅವರ ಮೈಯೆಲ್ಲ ಸೊರಗಿತ್ತು. ಅವರ ಶರೀರದ ಕಾಂತಿಯು ಎಳೇ ಬಿಸಿಲನ್ನು ಹೋಲುತ್ತಿತ್ತು. ಅವರು ಸ್ವಭಾವವಾಗಿಯೇ ಮುಂಗೋಪಿಗಳೆಂದೆಲ್ಲರೂ ಬಲ್ಲರು. ನಮ್ಮ ತಂದೆಯು ಅರಮನೆಯಲ್ಲಿ ಅವರ ಸೇವೆಗೆ ನನ್ನನ್ನು ಗೊತ್ತುಮಾಡಿದನು. ಆಗ ನಾನು ಸ್ನಾನ ಮೊದಲಾದ ಸಂದರ್ಭಗಳಲ್ಲೆಲ್ಲ ಅವರ ಮನೋಭಾವವನ್ನರಿತು ನಡೆಯುತ್ತಿದ್ದೆನು. ರಾಜಪುತ್ರಿಯಾದ ನಾನು ಯಾವಾಗಲೂ ಉಪವನಗಳಲ್ಲಿರುವ ಬಳ್ಳಿಗಳ ಕಡೆ ಹೆಚ್ಚು ಲಕ್ಷ್ಯವನ್ನಿಡುವದು ಸ್ವಭಾವವಷ್ಟೆ. ಈಗ ನಾನು ಯಾವಾಗಲೂ ಬಳ್ಳಿಗಳಂತಿದ್ದ ಅವರ ಹುಬ್ಬುಗಳ ಕಡೆಗೇ ಲಕ್ಷ್ಯವನ್ನಿಟ್ಟೆನು. ಯಾವಾಗ ಎಲ್ಲಿ ಅದು ಗಂಟುಕಟ್ಟಿಕೊಳ್ಳುವದೊ ಎಂದು ಭಯ. ಅವರ ಸೇವೆಯಲ್ಲಿ ನಾನು ಮೈಬೆವರುವವರೆಗೂ ಚೆನ್ನಾಗಿ ದುಡಿಯುತ್ತಿದ್ದೆನು. ಹೊರಗೆ ಆ ಮೈಬೆವರು ಹರಿದಷ್ಟೂ ಒಳಗೆ ಮನಸ್ಸಿನಲ್ಲಿ ಅವರ ಮೇಲಿನ ಭಕ್ತಿಯೆಂಬ ಬಳ್ಳಿಯು ಹಬ್ಬುತ್ತ ಬಂದಿತು. ತಪಸ್ಸಿನಿಂದ ಬಡವಾಗಿರುವ ಅವರ ಸೇವೆಯ ದುಡಿತದಿಂದ ನನ್ನ ಅವಯವಗಳೂ ಬಡವಾದವು.

"ಸಮಿತ್ತುಗಳನ್ನೂ ಅಭಿಷೇಕದ ನೀರನ್ನೂ ದೇವರ ಪೂಜೆಗಾಗಿ ಹೂಗಳನ್ನೂ ತರುವ ಕೆಲಸವನ್ನು ಕೂಡ ನಾನೇ ಮಾಡುತ್ತಿದ್ದೆನು. ಆದ್ದರಿಂದ ಅವರು ಅನೇಕ ಶಿಷ್ಯರಲ್ಲಿಡಬೇಕಾದ ಪ್ರೀತಿಯನ್ನೆಲ್ಲ ನನ್ನೊಬ್ಬಳಲ್ಲಿಯೇ ಇಟ್ಟರು. ನನ್ನ ಸುದೈವದಿಂದ ಅವರು ಯಾವಾಗಲೂ ತಮ್ಮಲ್ಲಿ ಕಾದುಕೊಂಡಿದ್ದ ಕೋಪವನ್ನು ದೂರಮಾಡಿದರು. ಹೀಗೆ ಅವರ ಸೇವೆಯು ನಮ್ಮ ಅರಮನೆಯ ಉದ್ಯಾನವನದಲ್ಲಿ ಒಂದು

ವರುಷ ನಡೆಯಿತು. ಒಮ್ಮೆ ಪರಿಜನರು ಯಾರೂ ಹತ್ತಿರದಲ್ಲಿಲ್ಲದಿರುವ ಅವಕಾಶ ದೊರೆಯಿತು. ನಾನೊಬ್ಬಳೇ ನಿಂತಿದ್ದೆನು. ಆ ಸಮಯದಲ್ಲಿ ಅವರು ನನ್ನನ್ನು ನೋಡಿದಾಗ ಅವರ ಯೋಗದ ಮತ್ತು ಮೌನವ್ರತದ ಬಿಗಿ ಸ್ವಲ್ಪ ಸಡಿಲವಾಯಿತು. ಆಗ ನಾನು ಮಾಡಿದ ಸೇವೆಗೆ ಸಂತುಷ್ಟರಾದೆವೆಂದು ಹೇಳಿ ಅವರು ನನ್ನನ್ನು ಹತ್ತಿರಕ್ಕೆ ಕರೆದು 'ನೀನು ಬಯಸಿದ್ದನ್ನು ಪೂರ್ಣಮಾಡಿಕೊಡುವಂಥ ಒಂದು ಮಂತ್ರವನ್ನು ಕೊಡುತ್ತೇವೆ' ಎಂದು ನನಗೆ ಉಪದೇಶಮಾಡಿದರು. ಸಿಟ್ಟುಗಾರರೆಂದು ಹೆಸರುಗೊಂಡ ಮಹರ್ಷಿಗಳು ನನ್ನ ವಿಷಯದಲ್ಲಿ ಇಷ್ಟು ಸಮಾಧಾನದಿಂದ ಅನುಗ್ರಹಮಾಡಿದ್ದನ್ನು ನೋಡಿ ನನ್ನನ್ನು ನಾನೇ ಕೃತಾರ್ಥಳೆಂದು ತಿಳಿದುಕೊಂಡೆನು. ಹೇ ನಾಥ, ಆ ಮಂತ್ರಪ್ರಭಾವದಿಂದ ಇಂದ್ರನೇ ಮೊದಲಾದ ದೇವತೆಗಳಲ್ಲಿ ಯಾರು ಬೇಕಾದರೂ ನನ್ನ ಮೇಲೆ ಕನಿಕರವುಳ್ಳವರಾಗುತ್ತಾರೆ. ಮತ್ತು ಏಕಾಂತದಲ್ಲಿ ಬಂದು ತಮ್ಮ ದೈವಿಕಶಕ್ತಿಯಿಂದ ನನ್ನಲ್ಲಿ ತಮಗೆ ಅನುರೂಪರಾದ ಮಕ್ಕಳನ್ನು ಸಂಪಾದಿಸಿಕೊಡುತ್ತಾರೆ."

ಈ ಮಾತನ್ನು ಕೇಳಿ ಪಾಂಡುರಾಜನಿಗೆ ಒಣಗಿದ ಬಳ್ಳಿಗೆ ನೀರೆರೆದಂತಾಯಿತು. ಇಷ್ಟರೊಳಗೆ ಕುಂತಿಯು ಒಮ್ಮೆ ಪರೀಕ್ಷಾರ್ಥವಾಗಿ ಸೂರ್ಯನನ್ನು ಬರಮಾಡಿಕೊಂಡು ಕರ್ಣನನ್ನು ಪಡೆದಿದ್ದಾದರೂ ಆ ವಿಷಯವನ್ನು ಹೇಳಲಿಲ್ಲ.

## ಧರ್ಮರಾಯ ಮೊದಲಾದವರ ಹುಟ್ಟು

ಕುಂತಿಯಾಡಿದ ಮಾತಿನಿಂದ ಪಾಂಡುರಾಜನಿಗೆ ಅಮೃತದಭಿಷೇಕವಾದಂತಾಯಿತು. ದೂರ್ವಾಸರ ಮಂತ್ರದಿಂದ ಫಲಿಸುವ ಮಕ್ಕಳ ಮುಖವನ್ನು ನೋಡಬೇಕೆಂದು ಅವನು ಕುತೂಹಲವನ್ನು ತೋರಿಸಿದನು. ಆಗ ಗಂಡನಪ್ಪಣೆಯಂತೆ ಸಿರ್ದೋಷಿಯಾದ ಕುಂತಿಯು ಆ ಮುನಿಯ ಉಪದೇಶದಂತೆ ಮಂತ್ರದ ಪುರಶ್ಚರಣೆಯನ್ನು ಮಾಡಿ ಯಮ

ನಿಂದ ಧರ್ಮಪ್ರಿಯನಾದ ಧರ್ಮರಾಜನನ್ನೂ ವಾಯುವಿನಿಂದ ಹಗೆಗ ಳೆದೆಯನ್ನು ಡಬಗುಟ್ಟಿಸುವ ಭೀಮನನ್ನೂ ಇಂದ್ರನಿಂದ ಅತ್ಯಂತಧೈರ್ಯ ಶಾಲಿಯಾದ ಅರ್ಜುನನನ್ನೂ ಹಡೆದಳು. ಆಮೇಲೆ ಮಾದ್ರಿಯು ಕುಂತಿ ಯಿಂದ ಒಂದು ಮಂತ್ರವನ್ನು ಕಲಿತು ಅಶ್ವಿನೀದೇವತೆಗಳ ಅನುಗ್ರಹದಿಂದ ಸುಂದರನಾದ ನಕುಲನನ್ನೂ ಬುದ್ಧಿಯಲ್ಲಿ ಬೃಹಸ್ಪತಿಯನ್ನು ವಿಾರಿಸುವ ಸಹದೇವನನ್ನೂ ಹಡೆದಳು. ಈ ಮಕ್ಕಳು ಹುಟ್ಟಿದಾಗ ಮುಂದೆ ಇವ ರಿಂದಾಗುವ ದೇಶಹಿತವನ್ನರಿತು ದೇವೇಂದ್ರನು ಸಂತೋಷಾತಿಶಯದಿಂದ ತನ್ನ ಸಭೆಯಲ್ಲಿ ಅಪ್ಸರಸ್ತ್ರೀಯರಿಂದ ನರ್ತನವನ್ನು ಮಾಡಿಸಿದನು. ಇಂದ್ರನ ವನದಲ್ಲಿ ಅರಳಿ ಅನೇಕಭ್ರಮರಗಳಿಂದ ತುಂಬಿದ್ದ ಹೂಗಳು ಭೂಮಿಯ ಮೇಲೆ ಮಳೆಯಾಗಿ ಸುರಿದವು. ಭೂಲೋಕದಲ್ಲಿ ಕೂಡ ಆ ಸಮಯದಲ್ಲಿ ಶುಭಸೂಚಕವಾಗಿ ಎಲ್ಲ ಜಲಾಶಯಗಳ ನೀರೂ ತಿಳಿ ಯಾಗಿ ಕಂಗೊಳಿಸಿದವು. ಯಾಗಮಾಡುವವರ ಅಗ್ನಿತ್ರಯಗಳು ತಮ್ಮ ಗೆಳೆಯನಾದ ವಾಯುವನ್ನು ಅನುಕರಿಸುವಂತೆ ಬಲಗಡೆಗೆ ಸುತ್ತುತ್ತ ಧಗಿಧಗಿಸಿದವು. ವಾಯುದೇವನು ತನಗೆ ಭೀಮನು ಮಗನಾಗಿ ಹುಟ್ಟಿದ ನೆಂದು ಪುರುಡಿನಿಂದ ಇತರರನ್ನು ಮುಟ್ಟುವದಕ್ಕೆ ಸಂಕೋಚಗೊಳ್ಳು ವನೆಂಬಂತೆ ಮೆಲ್ಲಗೆ ಬೀಸಿದನು.

ಕುಂತಿಯು ನಾಡಾಡಿಯ ಹೆಂಗಸರಂತೆ ಬಸಿರಾಗಿ ಹಡೆದವಳಲ್ಲ ವಾದ್ದರಿಂದ ಈ ಐವರು ರಾಜಪುತ್ರರೂ ಆ ಕಾಡಿನಲ್ಲಿ ಋಷಿಪತ್ನಿಯರ ಸ್ತನ್ಯಗಳಿಂದ ಬೆಳೆದರು. ಮೆಲ್ಲಮೆಲ್ಲಗೆ ಅವರು ಅಲ್ಲಿ ಸ್ವಲ್ಪವಾಗಿ ಸದ್ದು ಮಾಡುತ್ತಿದ್ದ ಬಿದಿರುಮೆಳೆಗಳ ಧ್ವನಿಗೆ ಕಿವಿಗೊಡುವದನ್ನು ಕಲಿ ತರು. ನಾರುಬಟ್ಟೆಗಳ ಮೇಲೆಯೇ ಅವರಿಗೆ ನಿದ್ರೆ. ಆ ಐವರು ಮಕ್ಕಳು ಹಸಿವೆಗೊಂಡು ಮೊಲೆಹಾಲಿಗಾಗಿ ನಾನು ಮುಂದು ತಾನು ಮುಂದೆಂದು ಜಗಳವಾಡುವಾಗ ಒಂದು ಮೊಲೆಯನ್ನು ಭೀಮನಿಗೊಬ್ಬನಿಗೂ ಇನ್ನೊಂದನ್ನು ಉಳಿದೆಲ್ಲರಿಗೂ ಕೊಡಬೇಕಾಗುತ್ತಿತ್ತು. ಭೀಮನು ಚಿಕ್ಕಂದಿನಲ್ಲಿಯೇ ಜಟ್ಟಿಗಳ ತಲೆಯ ಮೇಲೆ ಮಟ್ಟುವದನ್ನು ಕಲಿಯು ತ್ತಿರುವನೆಂಬಂತೆ ಹಾಸಿಗೆಯಲ್ಲಿ ಮೇಲುಮುಖವಾಗಿ ಮಲಗಿರುವಾಗ

ಮುಷ್ಟಿಯನ್ನು ಎತ್ತಿ ಹಿಡಿದುಕೊಂಡೇ ಇರುತ್ತಿದ್ದನು. ದಿನದಿನಕ್ಕೆ ಬೆಳೆಯುತ್ತ ಬಂದ ಆ ಮಕ್ಕಳು ಭೂಮಾತೆಯನ್ನು ಕಾಲಿನಿಂದ ಸೋಂಕಬಾರದೆಂದು ಎಣಿಸಿದವರಂತೆ ಅಂಬೆಗಾಲಿಕ್ಕುವದಕ್ಕೆ ಮೊದಲು ಮಾಡಿದರು. ಹೀಗೆ ಹರಿದಾಡುವ ಭೀಮನನ್ನು ಎತ್ತಿಕೊಂಡು ತಲೆಯನ್ನು ಮೂಸಿನೋಡುವಷ್ಟರಲ್ಲಿ ಅವನ ಭಾರದಿಂದ ಆ ಮುನಿಪತ್ನಿಯರ ಭುಜಗಳೆಂಬ ಬಳ್ಳಿಗಳು ಜೋಲುಬೀಳುತ್ತಿದ್ದವೇ ಹೊರತು ಅವನನ್ನು ಮುದ್ದಿಸುವ ಕುತೂಹಲವೇನೂ ಕಡಿಮೆಯಾಗುತ್ತಿರಲಿಲ್ಲ.

ಕೆಲವು ದಿವಸಗಳಾದ ಮೇಲೆ ಮುದುಕರಾದ ಋಷಿಗಳು ಎದುರಿಗಿದ್ದರೂ ಕೂಡ ಭೀಮನು ಗದಾಯುದ್ಧದ ಹಿಡಿತದ ಅಭ್ಯಾಸವನ್ನು ಮಾಡುವನೆಂಬಂತೆ ಅವರ ಯೋಗದಂಡವನ್ನು ಹಿಡಿದುಕೊಂಡು ಓಡುತ್ತಿದ್ದನು. ಋಷಿಪುತ್ರರಿಗೆ ಸಮಾನರಾದ ಆ ಧರ್ಮರಾಯ ಮೊದಲಾದವರು ತಮ್ಮ ಹುಡುಗತನಕ್ಕೆ ತಕ್ಕ ಆಟಗಳಿಂದ ಕಾಡಿನಲ್ಲಿ ಮದ್ದಾನೆಗಳು ಹೇಗೋ ಹಾಗೆ ತಮ್ಮ ಮೈಯನ್ನು ಧೂಳೀಮಯವಾಗಿ ಮಾಡಿಕೊಳ್ಳುತ್ತಿದ್ದರು. ಆ ಮಕ್ಕಳು ನುಣುಪಾದ ಮಣ್ಣಿರುವ ಕಡೆ ನಡೆದಾಗ ಅವರ ಅಂಗಾಲುಗಳಲ್ಲಿದ್ದ ಛತ್ರ, ಧ್ವಜ, ಕುಲಿಶ–ಈ ಗೆರೆಗಳು ಒಡಮೂಡಿ ಆ ಪ್ರಾಂತ್ಯವೆಲ್ಲ ಚಿತ್ರಿಸಿದಂತೆ ಆಗುತ್ತಿತ್ತು. ಆ ಹುಡುಗರು ವಿನೋದದಿಂದ ನಗುವಾಗ ತುಟಿಯ ಮೇಲೆ ಕಾಣುವ ಜೊಲ್ಲಿನ ಹನಿಗಳನ್ನು ನೋಡಿದರೆ ಅವರು ತೂತೂ ದಾರವೂ ಇಲ್ಲದ ಮುತ್ತಿನ ಮಾಲೆಯನ್ನು ಧರಿಸಿರುವಂತೆ ಕಾಣುತ್ತಿತ್ತು. ಈ ಎಲ್ಲ ಮಕ್ಕಳೂ ಋಷಿಪುತ್ರರೊಡನೆ ಅಡವಿಯ ಬಳ್ಳಿಗಳನ್ನೆಲ್ಲ ಜೋಡಿಸಿ ಗಟ್ಟಿಯಾಗಿ ಕಟ್ಟಿ ಒಬ್ಬೊಬ್ಬರಾಗಿ ಉಯ್ಯಾಲೆಯನ್ನಾಡುತ್ತಿದ್ದರು. ಅದು ಭೀಮನ ಪಾಲಿಗೆ ಬಂದೊಡನೆ ಅವನು ಕುಳಿತುಕೊಳ್ಳುತ್ತಲೆ ಅದರ ಆಯುಸ್ಸು ಮುಗಿಯುತ್ತಿತ್ತು. ಒಮ್ಮೊಮ್ಮೆ ಭೀಮನು ಬೆಟ್ಟದಂಥ ಕಾಡಾನೆಯ ಕೋರೆ ಹಲ್ಲುಗಳನ್ನು ಹಿಡಿದು ನಿಲ್ಲಿಸುವನು. ಆಗ ಉಳಿದವರೆಲ್ಲರೂ ಅದನ್ನು ಹತ್ತುವರು. ಆದರೆ ಅಭಿಮಾನಶಾಲಿಯಾದ ಅರ್ಜುನನು

ಮಾತ್ರ ಇನ್ನೊಬ್ಬರ ಸಹಾಯವಿಲ್ಲದೆ ಏರಿದವನೆನಿಸಿಕೊಳ್ಳಬೇಕೆಂದು ತಾನೆ ಅದರ ಸೊಂಡಿಲನ್ನು ಹಿಡಿದುಕೊಂಡು ಹತ್ತುತ್ತಿದ್ದನು.

ಈ ಎಲ್ಲ ಮಕ್ಕಳಿಗೂ ಮುಂಜಿಯಾಯಿತು. ದಿನದಿನಕ್ಕೆ ಅವರು ಪ್ರಾಯದವರೂ ಆದರು. ಅವರಿಗೆ ಅರವತ್ತನಾಲ್ಕು ವಿದ್ಯೆಗಳಲ್ಲಿಯೂ ಪಾಂಡಿತ್ಯವು ಉಂಟಾಯಿತು.

## ಪಾಂಡುರಾಜನ ಸಾವು

ಹೀಗಿರುವಾಗ ಒಮ್ಮೆ ವಸಂತರ್ತು ಹೆಜ್ಜೆಯನ್ನಿಟ್ಟಿದೆ. ಎಲ್ಲಿ ನೋಡಿದರೂ ದಕ್ಷಿಣದ ಸುಳಿಗಾಳಿ ಎಡೆಬಿಡದೆ ಬೀಸುತ್ತಿದೆ. ಆ ಗಾಳಿಯಿಂದ ತೂಗಾಡುತ್ತಿರುವ ಸಂಪಗೆಯ ಹೂವಿನಿಂದ ಸುಗಂಧವು ಹೊರಟು ಆಕಾಶವನ್ನೆಲ್ಲ ವ್ಯಾಪಿಸಿದೆ. ಎತ್ತ ನೋಡಿದರೂ ಪುಷ್ಪಗಳ ಪರಾಗಗಳು ಹಾರಾಡುತ್ತಿವೆ. ಕೋಗಿಲೆಗಳು ಮಾವಿನ ಚಿಗುರುಗಳನ್ನು ತಿಂದು ಕೊಬ್ಬಿ ಕುಹೂಧ್ವನಿಯಿಂದ ದಾರಿಹೋಕರ ಮನಸ್ಸನ್ನು ಮೂರ್ಛೆಗೊಳಿಸುತ್ತಿವೆ. ಆಶ್ರಮದ ಮರಗಳೆಲ್ಲ ಕಿರುಗಾಳಿಯಿಂದ ಅಲುಗುತ್ತಿವೆ. ಹೂವಿನ ರಸವನ್ನು ಕುಡಿದು ಕುಡಿದು ಮದವೇರಿ ಭೃಂಗಗಳು ಹಾರಾಡುತ್ತ ಝೇಂಕರಿಸುತ್ತಿವೆ. ದಂಪತಿಗಳಾಗಿರುವವರೆಲ್ಲರೂ ಈ ಸಮಯದ ಆನಂದವನ್ನು ಅನುಭವ ಮಾಡುತ್ತಿರುವಾಗ ಪಾಂಡುರಾಯನು ಯಾವ ಉತ್ಸಾಹಕ್ಕೂ ಭಾಗಿಯಾಗದೆ ತಾನೊಬ್ಬನೇ ಬೇರೆ ಇದ್ದುಕೊಂಡು ತನ್ನ ದುರ್ದೈವಕ್ಕಾಗಿ ತನ್ನನ್ನು ತಾನೆ ಬಯ್ದುಕೊಳ್ಳುತ್ತಿದ್ದಾನೆ.

ಆಗ ಪಾಂಡುರಾಯನ ಮೈಮೇಲೆ ಯಾವ ಗಾಯಗಳೂ ಕಾಣದಿದ್ದರೂ ಅವನ ಮನಸ್ಸು ಬಹಳ ಹೆಚ್ಚಿನ ತಳಮಳಕ್ಕೊಳಗಾಗಿತ್ತು. ಕೊನೆಗೆ ಅವನು ಅದರ ವೇಗವನ್ನು ತಡೆಯಲಾರದೆ ಹೊರಗೆ ಬಂದು ಒಂದು ವಿಹಾರಸ್ಥಾನದಲ್ಲಿ ತನ್ನ ತಾಪವನ್ನು ಕಳೆದುಕೊಳ್ಳಬೇಕೆಂದು ಒಂದು ಕೆಂಪು ಗೋರಂಟಿಯ ಬಳ್ಳಿಯ ಪೊದೆಯ ಕಡೆಗೆ ಕಣ್ಣುಹಾಕಿದನು. ಆ ಸಮಯದಲ್ಲಿ ಮಾದ್ರಿಯು ಅವನ ಸಮೀಪದಲ್ಲಿದ್ದಳು.

ಗಂಡಾನೆಯು ಹೆಣ್ಣಾನೆಯನ್ನು ಕರೆದುಕೊಂಡು ಹೊರಡುವಂತೆ ಪಾಂಡುರಾಯನು ಮಾದ್ರಿಯನ್ನು ಕರೆದುಕೊಂಡು ಯಾರಿಗೂ ಕಾಣದಂತೆ ಮುಂದುವರಿದನು. ಪತಿಗೆ ಬಂದಿದ್ದ ಶಾಪವು ಮಾದ್ರಿಗೂ ಗೊತ್ತಿತ್ತು. ಆದ್ದರಿಂದ ತನ್ನ ವಲಪಿನಿಂದ ರಾಜನನ್ನು ಮೋಹಗೊಳಿಸುವ ವಿಷಯದಲ್ಲಿ ಮಾದ್ರಿಯೂ ಸಂಕೋಚಗೊಳ್ಳುತ್ತಿದ್ದಳು. ಆದರೂ ಪಾಂಡುರಾಯನು ಆ ಪೊದೆಯಲ್ಲಿ ಸ್ವಭಾವವಾಗಿ ಆಗಿದ್ದ ಹೂವಿನ ಹಾಸಿಗೆಯ ಮೇಲೆ ಮಾದ್ರಿಯೊಡನೆ ವಿಶ್ರಮಿಸಿಕೊಂಡನು.

ಆಗ ಕಿಂದಮಋಷಿಯ ಶಾಪವು ಫಲವನ್ನು ಕೊಡುವಪಕ್ಕೆ ಬಂದಂತೆ ಕಾಣುತ್ತದೆ. ಅವರು ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಆಗ ಆದ ಆನಂದದ ಉದ್ರೇಕದಿಂದ ಅವರ ಮೈಗಳು ಬೆವರಿಟ್ಟವು. ಒಡನೆ ಪಾಂಡುರಾಯನ ಆಯುಸ್ಸಿಗೆ ಪೂರ್ಣವಿರಾಮವಾಯಿತು. ನಿದ್ರೆಯಿಂದ ಹೇಗೋ ಹಾಗೆ ಮರಣದಿಂದ ಕಣ್ಣುಮುಚ್ಚಿದ್ದ ತನ್ನ ಪತಿಯನ್ನು ನೋಡಿ ಮಾದ್ರಿಯು ಬೆಚ್ಚುಬಿದ್ದು ಗಟ್ಟಿಯಾಗಿ ಅಳುವದಕ್ಕೆ ಮೊದಲುಮಾಡಿದಳು. ಮಾದ್ರಿಯ ಅಳುವನ್ನು ಕೇಳಿ ಕುಂತಿಯು ಧರ್ಮರಾಯ ಮೊದಲಾದ ಮಕ್ಕಳೊಂದಿಗೆ ಆ ಸ್ಥಲಕ್ಕೆ ಬಂದಳು. ಎಲ್ಲರೂ ಮಾದ್ರಿಯ ಅಳುವಿಗೆ ಓಮ್ಮೇಳದವರಾದರು. ಕೊನೆಗೆ ಮಾದ್ರಿಯು ತನ್ನ ಪತಿಗೆ ತನ್ನಿಂದ ಮರಣವಾದದ್ದಕ್ಕಾಗಿ ನೊಂದು ಸಹಗಮನವನ್ನು ಮಾಡಿದಳು. ಧರ್ಮರಾಯ ಮೊದಲಾದವರು ಉತ್ತರ ಕ್ರಿಯೆಗಳನ್ನು ಮಾಡಿದರು.

## ಧರ್ಮರಾಯ ಮೊದಲಾದವರು ಹಸ್ತಿನಾಪುರಕ್ಕೆ ಬಂದದ್ದು

ಕುಂತಿಗೆ ಗಂಡನನ್ನು ಕಳೆದುಕೊಂಡ ದುಃಖ, ಧರ್ಮರಾಯ ಮೊದಲಾದವರಿಗೆ ತಂದೆಯನ್ನು ಕಳೆದುಕೊಂಡ ದುಃಖ. ಹೀಗಿರುವಾಗ ಶತಶೃಂಗಪರ್ವತದಲ್ಲಿದ್ದ ಕಾಶ್ಯಪನೇ ಮೊದಲಾದ ಋಷಿಗಳೆಲ್ಲ ಅಲ್ಲಿಗೆ ಬಂದು ಅವರೆಲ್ಲರಿಗೂ ಧೈರ್ಯವನ್ನು ಹೇಳಿ ರಾಜನೀತಿಯನ್ನು ಉಪದೇ

ಶಿಸಿ ಅವರ ಮೇಲಿನ ಕನಿಕರದಿಂದ ಅವರನ್ನು ಹಸ್ತಿನಾಪುರಕ್ಕೆ ಕರೆದು ಕೊಂಡು ಬಂದರು.

ಆಗ ಹಸ್ತಿನಾಪುರದಲ್ಲಿ ಪಾಂಡುರಾಯನ ಅಣ್ಣನಿದ್ದನು. ಅವನು ಹುಟ್ಟುಕುರುಡನು. ಅವನ ಹೆಸರು ಧೃತರಾಷ್ಟ್ರ. ಕುಂತಿಯು ತನ್ನ ಮಕ್ಕಳೊಡನೆ ಅರಣ್ಯದಿಂದ ಹಿಂದಿರುಗಿ ಮನೆಗೆಬಂದಳೆಂಬ ಸುದ್ದಿ ಯನ್ನು ಕೇಳುತ್ತಲೆ ಧೃತರಾಷ್ಟ್ರನು ತನ್ನ ತಮ್ಮನ ಮಕ್ಕಳನ್ನು ಅಪ್ಪಿಕೊ ಳ್ಳಬೇಕೆಂಬ ಸಡಗರದಿಂದ ಎರಡು ಕೈಗಳನ್ನೂ ಅಗಲಿಸಿಕೊಂಡು ಮುಂದೆ ಬಂದನು. ಮಕ್ಕಳ ಹತ್ತಿರಕ್ಕೆ ಬರುತ್ತಲೆ ಅವನು ಅವರನ್ನು ಅಪ್ಪಿಕೊಂಡು ಮುದ್ದಿಸಿ ತನ್ನ ತೊಡೆಯಮೇಲೆ ಕೂಡಿಸಿಕೊಂಡನು. ಆಸಮಯದಲ್ಲಿ ಪಾಂಡುರಾಯನ ನೆನಪು ಬಂದು ಅವನ ಕಣ್ಣುಗಳಿಂದ ನೀರಿನ ಕೋಡಿ ಹರಿ ಯಿತು. ಅವರನ್ನು ಕಣ್ಣಾರೆನೋಡುವ ಸುಯೋಗವಿಲ್ಲದ ಧೃತರಾಷ್ಟ್ರನು ಸುಮ್ಮನೆಮುಟ್ಟಿಮುಟ್ಟಿ ನೋಡುವದರಿಂದಲೆ ಅವರ ಮೈಸೊಂಪು,ವಯಸ್ಸು, ರೂಪ–ಮೊದಲಾದವುಗಳನ್ನು ತಿಳಿದುಕೊಂಡನು. ಧೃತರಾಷ್ಟ್ರನಿಗೆ ನೂರು ಮಂದಿ ಮಕ್ಕಳಿದ್ದರು. ಈಗ ಅವನು ತಾನು ನೂರೈದು ಮಕ್ಕಳ ತಂದೆಯೆಂ ಬಂತೆ ದಿನದಿನವೂ ಪಾಂಡುವಿನ ಮಕ್ಕಳಿಗೆ ಬೇಕಾದದ್ದೆಲ್ಲವನ್ನೂ ಕೊಡುತ್ತ ಎಲ್ಲರನ್ನೂ ಸಮದೃಷ್ಟಿಯಿಂದ ನೋಡುತ್ತಿದ್ದನು.

ಆ ಪಾಂಡವರು ಕೂಡ ಧೃತರಾಷ್ಟ್ರನ ಮೇಲೆ ಒಳ್ಳೆ ಭಕ್ತಿಯ ನ್ನಿಟ್ಟು ನಡೆದುಕೊಳ್ಳುತ್ತಿದ್ದರು. ಇದನ್ನು ಕಂಡು ಧೃತರಾಷ್ಟ್ರರಾ ಯನೂ ಹಿರಿಹಿರಿ ಹಿಗ್ಗುತ್ತಿದ್ದನು. ಧೃತರಾಷ್ಟ್ರರಾಯನ ಹಿರಿಯ ಮಗನಾದ ದುರ್ಯೋಧನನಿಗೆ ಮಾತ್ರ ತಮ್ಮ ತಂದೆಯ ಮತ್ತು ಪಾಂಡ ವರ ಪ್ರೇಮಸಂಬಂಧವು ಒಗ್ಗಲಿಲ್ಲ. ಪಾಂಡವರಿಗೆಲ್ಲಿ ಹೆಚ್ಚುಗಾರಿಕೆ ಯುಂಟಾದೀತೋ ಎಂದು ಅವನ ಮನಸ್ಸು ಕುದಿಯುತ್ತಿತ್ತು. ಹೀಗಾಗಿ ದುರ್ಯೋಧನನ ಹೃದಯದಲ್ಲಿ ಪಾಂಡವರ ಮೇಲಿನ ಹಗೆತನವೆಂಬ ವಿಷದ ಬಳ್ಳಿ ಬೆಳೆಯುವದಕ್ಕಾರಂಭಿಸಿತು. ಕರ್ಣನೇ ಮೊದಲಾದ ಕೆಲ ವರು ದುರ್ಯೋಧನನ ಮನಸ್ಸನ್ನು ಒಲಿಸಿಕೊಳ್ಳುವ ಇಚ್ಛೆಯಿಂದ

ಆ ವಿಷದ ಬಳ್ಳಿಯ ಬೆಳೆವಣಿಗೆಗೆ ತಕ್ಕ ಹಾಗೆ ದುರ್ಯೋಧನನೆಂಬ ನೀರೆರೆಯುತ್ತ ಬಂದರು. ಧೃತರಾಷ್ಟ್ರನ ಹೊಟ್ಟೆಯಲ್ಲಿ ಹುಟ್ಟಿದವರಾದ ಅವರು ದಿನದಿನಕ್ಕೆ ಮೇಲುಗೈಯವರಾಗುತ್ತ ಕೆಟ್ಟ ಚೇಷ್ಟೆಗಳನ್ನು ಮಾಡುತ್ತ ದುರಭಿಮಾನಿಗಳಾಗಿ ಪಟ್ಟಕ್ಕೆ ಕಾದಿದ್ದರು. ಈ ಸುಳಿವನ್ನು ತಿಳಿದ ಭೀಮನು ಅವರ ತಲೆಯ ಮೇಲೆ ಮುಟ್ಟುವದಕ್ಕೆ ತನ್ನ ಮುಷ್ಟಿಯನ್ನು ಸರಿಮಾಡಿಕೊಳ್ಳುತ್ತಿದ್ದನು. ಈ ಗುಟ್ಟು ದುರ್ಯೋಧನ ಮೊದಲಾದವರಿಗೂ ತಿಳಿಯಿತು. ಆದ್ದರಿಂದ ಅವರೆಲ್ಲರೂ ಸಾಮಾನ್ಯವಾಗಿ ಪಾಂಡವರೆಲ್ಲರನ್ನೂ ಕೆಟ್ಟ ಕಣ್ಣಿನಿಂದ ನೋಡುತ್ತಿದ್ದರಲ್ಲದೆ ವಿಶೇಷವಾಗಿ ಭೀಮನ ಮೇಲೆ ಹೆಚ್ಚು ವಿಷವನ್ನು ಕಕ್ಕುತ್ತಿದ್ದರು.

## ದುರ್ಯೋಧನನ ದುರಾಲೋಚನೆ

ಒಮ್ಮೆ ದುರ್ಯೋಧನ ಮೊದಲಾದ ಕೌರವರೂ ಧರ್ಮರಾಯ ಮೊದಲಾದ ಪಾಂಡವರೂ ಗಂಗಾನದಿಯಲ್ಲಿ ನೀರಾಟಕ್ಕೆ ಇಳಿದರು. ನೀರಾಟವಾಯಿತು. ಎಲ್ಲರೂ ದಡಕ್ಕೆ ಬಂದರು. ಗಂಗಾನದಿಯ ನೊರೆಗಳ ಸಾಲಿನಂತೆ ಬೆಳ್ಳಗೆ ಹೊಳೆಯುತ್ತಿದ್ದ ಗುಡಾರಗಳೊಳಕ್ಕೆ ಎಲ್ಲರೂ ಹೋದರು. ಅಲ್ಲಿ ಅವರು ಒಳ್ಳೆ ಮಡಿಯಾದ ಬಟ್ಟೆಗಳನ್ನುಟ್ಟದ್ದೂ ಆಯಿತು; ಸುಗಂಧದ್ರವ್ಯಗಳನ್ನು ಬಳಿದುಕೊಂಡದ್ದೂ ಆಯಿತು; ಹೂಗಳನ್ನು ಮುಡಿದುಕೊಂಡದ್ದೂ ಆಯಿತು; ಊಟಗಳನ್ನು ಮಾಡಿದ್ದೂ ಆಯಿತು. ಆಮೇಲೆ ಒಳ್ಳೆ ಚತುರರಾದ ಹಾಡುಗಾರಿಕೆಯವರು ನೆರೆದರು ವೀಣೆ, ಕೊಳಲು, ಮೃದಂಗ, ತಾಲ—ಮೊದಲಾದ ವಾದ್ಯಧ್ವನಿಗಳು ಭೋರ್ಗರೆದವು. ಎಲ್ಲರೂ ಗಾನಾನಂದದಲ್ಲಿ ಮುಳುಗಿಹೋದರು.

ದುರ್ಯೋಧನನಿಗೆ ಭೀಮನ ಮೇಲೆ ಯಾವಾಗಲೂ ಒಂದು ಕಣ್ಣು ಇದ್ದೇ ಇತ್ತಷ್ಟೆ. ಆ ಭೀಮನು ಈಗ ಗಂಗಾತೀರದಲ್ಲೊಂದು ಕಡೆ ಒಂಟಿಯಾಗಿದ್ದು ತನ್ನ ಆಯಾಸವನ್ನು ಕಳೆದುಕೊಳ್ಳಬೇಕೆಂದು ಒಂದು

ತೋಪಿನಲ್ಲಿ ಕಮಲದ ಹೂಗಳ ಹಾಸಿಗೆಯನ್ನು ಮಾಡಿಕೊಂಡು ಹಾಯಾಗಿ ಮಲಗಿ ಗೊರಕೆಯನ್ನು ಹೊಡೆಯುತ್ತಿದ್ದನು. ವಾಯು ದೇವನು ಸುವಾಸನೆಯಿಂದ ಕೂಡಿ ಅವನ ಮೈಮೇಲೆ ಬೀಸುತ್ತ ತನ್ನ ಮಗನಾದ ಅವನಿಗೆ ಉಪಚಾರವನ್ನು ಮಾಡುತ್ತಿದ್ದನು. ಆ ಸಮಯ ದಲ್ಲಿ ಅವನ ಆಯುಸ್ಸನ್ನು ಮುಗಿಸಿಬಿಡಬೇಕೆಂದು ಯೋಚಿಸಿ ದುರ್ಯೋ ಧನನು ವಿಷವೈದ್ಯರನ್ನು ಎತ್ತುಗಟ್ಟಿದನು. ಅವರು ಅನೇಕಕ್ರೂರ ಸರ್ಪಗಳನ್ನು ಒಂದು ಬುಟ್ಟಿಯಲ್ಲಿ ತುಂಬಿಕೊಂಡು ತಂದು ಭೀಮನ ಹಾಸಿಗೆಯ ಹತ್ತಿರದಲ್ಲಿಟ್ಟು ಅದರ ಬಾಯನ್ನು ಹಾರಹೊಡೆದರು. ಒಡನೆ ಸರ್ಪಗಳು ಭೀಮನ ಮೇಲೆ ಬಿದ್ದು ತಮ್ಮ ರೋಷವನ್ನೆಲ್ಲ ತೀರಿಸಿಕೊಂಡವು. ಈ ಅನ್ಯಾಯವನ್ನು ತಡೆದುಕೊಳ್ಳಲಾರದೆ ವನ ದೇವತೆಗಳೆಲ್ಲರೂ ಭೀಮನಿಗೆ ಆಶೀರ್ವಾದವನ್ನು ಮಾಡಿದರು. ಈ ಆಶೀ ರ್ವಾದದ ಬಲದಿಂದ ಭೀಮನ ಸಾಮರ್ಥ್ಯವು ಹುರಿದುಂಬಿಕೊಂಡಿತು. ಮರುದಿನ ಬಂದು ನೋಡಿದಾಗ ಭೀಮನು ಕೆಂದಾವರೆಯಂತೆ ಕಣ್ಣುಳ್ಳ ವನಾಗಿ ನಿದ್ರೆಯಿಂದೆಚ್ಚತ್ತವನಂತೆ ಬದುಕಿದ್ದನು.

ಮೂಢನಾದ ದುರ್ಯೋಧನನು ಆಗ ಭೀಮನ ವಿಷಯದಲ್ಲಿ ಗೆಳೆ ಯತನವನ್ನು ನಟಿಸುತ್ತ ಒಂದು ದಿನ ಅವನನ್ನು ಊಟಕ್ಕೆ ಕರೆದು ಕೂಡಿ ಸಿದನು. ಅಡಿಗೆಯವರು ಅವನಿಗೆ ವಿಷದ ಅನ್ನವನ್ನು ತಂದು ಬಡಿಸಿ ದರು. ಭೋಜನಪ್ರಿಯನಾದ ಭೀಮನು ಅವನ್ನೆಲ್ಲ ತಿಂದು ತೇಗಿದನು. ಒಡನೆ ಅವನ ಕುತ್ತಿಗೆಯು ಜೋಲುಬಿತ್ತು. ತನುಗೆಲ್ಲ ಶೂಲದಂತಿದ್ದ ಅವನನ್ನು ದುರ್ಯೋಧನನು ಉದ್ದವಾದ ಹಗ್ಗಗಳಿಂದ ಬಿಗಿಯಾಗಿ ಕಟ್ಟಿಸಿ ಗಂಗಾನದಿಯ ನಡುವೆ ಜಲಸಮಾಧಿಯನ್ನು ಮಾಡಿಸಿದನು. ಆಗ ಭೀಮನು ಆ ನೀರಿನಲ್ಲಿ ಮುಳುಗಿ ತಲಕ್ಕೆ ಇಳಿಯುತ್ತ ಇಳಿಯುತ್ತ ಪಾತಾಲಲೋಕಕ್ಕೆ ಸೇರಿದನು. ಅವನನ್ನು ನೋಡಿ ಪಾತಾಲಲೋಕ ದವರೆಲ್ಲ ಉತ್ಸಾಹಗೊಂಡರು. ಅಲ್ಲಿಯ ಸರ್ಪರಾಜನು ಆದರಪೂ ರ್ವಕವಾಗಿ ಅವನಿಗೆ ಅಮೃತಕಲಶವನ್ನು ಕೊಟ್ಟು ಬಹುಮಾನಿಸಿ ದನು.

ಇತ್ತ ಕುಂತಿಯು ತನ್ನ ಮಗನಾದ ಭೀಮನು ಸತ್ತುಹೋಗಿರ ಬಹುದೆಂದು ಸಂದೇಹಗೊಂಡು ಮಕ್ಕಳೊಡನೆ ಎಂಟು ದಿಕ್ಕುಗಳ ಲ್ಲಿಯೂ ಎಂಟು ದಿನಗಳವರೆಗೂ ಹುಡುಕಿದಳು. ಅವಳ ಗೋಳು ಎಂಟು ದಿಕ್ಕುಗಳಲ್ಲಿಯೂ ತುಂಬಿತು. ಭೀಮನು ಒಂಬತ್ತನೆಯ ದಿನ ಮೇಲಕ್ಕೆ ಬಂದು ತನ್ನ ತಾಯಿಗೆ ಕಾಣಿಸಿಕೊಂಡನು. ಆಗ ಕುಂತಿಗೆ ಬಹಳ ಆನಂದವಾಯಿತು. ತಿರುಗಿ ಬಂದ ಭೀಮನು ಬರೀ ಮೊದಲ ಭೀಮನು ಮಾತ್ರ ಆಗಿರಲಿಲ್ಲ. ಪಾತಾಲಲೋಕದಲ್ಲಿ ಹತ್ತು ಕಲಶ ಗಳಲ್ಲಿ ತುಂಬಿಟ್ಟಿದ್ದ ಅಮೃತವನ್ನು ಕುಡಿದ ಭೀಮನು ಹತ್ತುಸಾವಿರ ಮದ್ದಾನೆಗಳ ಬಲದಿಂದ ಕೂಡಿದ್ದನು. ಅವನ ಆ ಸ್ಥಿತಿಯನ್ನು ನೋಡಿ ಧರ್ಮರಾಯ ಮೊದಲಾದವರು ಬಹಳ ಆನಂದಗೊಂಡರು; ದುರ್ಯೋ ಧನ ಮೊದಲಾದವರ ಹೊಟ್ಟೆಗೆ ಮಾತ್ರ ಬೆಂಕಿ ಬಿದ್ದಂತಾಯಿತು.

## ಕೌರವಪಾಂಡವರ ಧನುರ್ವಿದ್ಯಾಭ್ಯಾಸ

ತಿಳಿವಳಿಕೆಯುಳ್ಳ ಧೃತರಾಷ್ಟ್ರನು ಎಲ್ಲ ಮಕ್ಕಳಿಗೂ ಧನುರ್ವಿದ್ಯೆ ಯನ್ನು ಕಲಿಸಬೇಕೆಂದು ಮನಸ್ಸುಮಾಡಿದನು. ತನ್ನ ಮಕ್ಕಳ ಕೀರ್ತಿಯು ಹತ್ತು ದಿಕ್ಕುಗಳಿಗೂ ಹಬ್ಬಬೇಕೆಂದು ಧೃತರಾಷ್ಟ್ರನ ಉದ್ದೇಶ. ಈ ಹುಡುಗರಿಗೂ ಹತ್ತು ದಿಕ್ಕುಗಳನ್ನು ಗೆಲ್ಲುವ ಉದ್ದೇಶ. ಆಗಿನ ಕಾಲದಲ್ಲಿ ದ್ರೋಣಾಚಾರ್ಯರೆಂಬುವರು ಅಸ್ತ್ರವಿದ್ಯೆಯಲ್ಲಿ ಬಹಳ ಮೇಲುಗೈ ಆಗಿದ್ದರು. ಕೌರವರೂ ಪಾಂಡವರೂ ಎಲ್ಲರೂ ಅವರಲ್ಲಿ ಕಲಿಯಬೇಕೆಂದು ಗೊತ್ತಾಯಿತು. ಎಲ್ಲರಿಗೂ ಮುತ್ತಯ್ಯನಾದ ಭೀಷ್ಮನು ದ್ರೋಣರ ಮನಸ್ಸನ್ನು ಚೆನ್ನಾಗಿ ಒಲಿಸಿಕೊಂಡು ಅವರನ್ನು ಬೇಕಾದ ಹಾಗೆ ಸತ್ಕಾರಮಾಡಿ ಅವರನ್ನು ಆಚಾರ್ಯಸ್ಥಾನದಲ್ಲಿ ಕೂಡಿ ಸಿದನು. ಅವರಿಂದ ಧನುರ್ವಿದ್ಯೆಯ ಶಿಕ್ಷಣ ಚೆನ್ನಾಗಿ ಸಾಗಿತು. ಮಕ್ಕಳೆಲ್ಲರೂ ಶೀಘ್ರದಲ್ಲಿಯೇ ಅದರಲ್ಲಿ ನೈಪುಣ್ಯವನ್ನು ಹೊಂದಿ ದರು.

ದ್ರೋಣಾಚಾರ್ಯರನ್ನು ಒಮ್ಮೆ ದ್ರುಪದರಾಜನು ತಿರಸ್ಕಾರಮಾಡಿದ್ದನು. ಆದರ ಮುಯ್ಯಿತೀರಿಸಿಕೊಳ್ಳಬೇಕೆಂದು ಈಗ ಅವರ ಮನಸ್ಸಿಗೆ ಬಂತು. ವಿದ್ಯಾಭ್ಯಾಸವನ್ನೆಲ್ಲ ಮುಗಿಸಿದ್ದ ಆ ರಾಜಪುತ್ರರನ್ನು ಕರೆದು ಅವರು 'ನನಗೆ ದ್ರೋಹಿಯಾದ ದ್ರುಪದನನ್ನು ಹಿಡಿದು ತಂದು ಗುರುದಕ್ಷಿಣೆಯಾಗಿ ಕೊಡಬೇಕು'–ಎಂದು ಕೇಳಿದರು. ಆಗ ಎಲ್ಲರೂ ನಾನು ಮುಂದು ತಾನು ಮುಂದೆಂದು ಹೊರಟು ಶತ್ರುಸೇನೆಯನ್ನು ಧಿಕ್ಕರಿಸಿ ದ್ರುಪದರಾಜನ ಪಟ್ಟಣವನ್ನು ಮುತ್ತಿ ಬಹಳ ಕಾಲ ಯುದ್ಧವನ್ನು ಮಾಡಿದರು. ಗುರುದ್ರೋಹಿಯಾದ ಆ ದ್ರುಪದನನ್ನು ಜೀವದೊಡನೆ ಹಿಡಿದು ತರುವದು ದುರ್ಯೋಧನ ಮೊದಲಾದವರ ಕೈಗೆ ದಕ್ಕಲಿಲ್ಲ. ಅವರೆಲ್ಲ ಜೋಲುಮುಖವನ್ನು ಹಾಕಿಕೊಂಡ ಮೇಲೆ ಅರ್ಜುನನು ಮುಂದುವರಿದನು. ದ್ರುಪದನು ಮೊದಲ ಹೊಡೆತಕ್ಕೇ ಅರ್ಜುನನ ಧನುಸ್ಸನ್ನು ಇಬ್ಭಾಗವಾಗಿ ಮಾಡಿಬಿಟ್ಟನು. ಆದರೂ ಬಳಿಯಂತಿದ್ದ ಒಂದು ಖಡ್ಗವನ್ನೆ ಹಿಡಿದು ಅವನು ತನ್ನ ಹೋರಾಟವನ್ನು ಸಾಧಿಸಿದನು. ಅದನ್ನು ಕಂಡವರೂ ಕೇಳಿದವರೂ ಎಲ್ಲರೂ ಅರ್ಜುನನನ್ನು ಹೊಗಳಿದರು. ಆಗ ಜಯಶಾಲಿಯಾದ ಅರ್ಜುನನನ್ನು ಮುಂದು ಮಾಡಿಕೊಂಡು ಸೆರೆಯಾಳಾದ ದ್ರುಪದನನ್ನು ಎಲ್ಲರೂ ಗುರುಗಳ ಬಳಿಗೆ ತಂದೊಪ್ಪಿಸಿ ಅಡ್ಡಬಿದ್ದು ನಿಂತುಕೊಂಡರು. ದ್ರುಪದನೂ ನಾಚಿಕೆಯಿಂದ ತಲೆಯನ್ನು ತಗ್ಗಿಸಿದನು. ಅವನನ್ನು ಕುರಿತು ದ್ರೋಣಾಚಾರ್ಯರು ಮರ್ಮಭೇದಕವಾದ ಮಾತಾಡಿದ್ದೇನೆಂದರೆ:— "ಎಲೋ ಕ್ಷತ್ರಿಯನೆ, ಹಿಂದೆ ನಾವಿಬ್ಬರೂ ಒಬ್ಬ ಮುನಿಯ ಬಳಿಯಲ್ಲಿ ಧನುರ್ವಿದ್ಯೆಯನ್ನು ಜೊತೆಯಲ್ಲಿ ಕಲಿಯುತ್ತಿದ್ದದ್ದನ್ನು ಮರೆತೆಯಾ? ತಂದೆಯು ಸತ್ತೊಡನೆ ಅರ್ಧರಾಜ್ಯವನ್ನು ಕೊಡುತ್ತೇನೆಂದು ನೀನು ನನಗೆ ಮಾತುಕೊಟ್ಟದ್ದು ನೆನಪಿಲ್ಲವೆ? ಬಡತನದಿಂದ ನೊಂದ ನಾನು ಸಹಾಯವನ್ನು ಬಯಸಿ ನಿನ್ನ ಬಳಿಗೆ ಬಂದಾಗ ನನ್ನನ್ನು ಬಡ ಹಾರವನೆಂದು ಧಿಕ್ಕರಿಸಿ ಮನಸ್ಸು ನೋಯುವಂಥ ಮಾತಾಡಿದೆಯಲ್ಲ! ನೀನಾಡಿದ ಮಾತೇನಾಯಿತು?"

ಈ ಪ್ರಕಾರವಾಗಿ ಪರಶುರಾಮರ ಶಿಷ್ಯನಾದ ದ್ರೋಣನು ಎಲ್ಲರ ಎದುರಿಗೂ ದ್ರುಪದನ ಮುಖದ ನೀರಿಳಿಸಿದನು. ಕೊನೆಗೆ ದ್ರುಪದನು ದ್ರೋಣನಿಗೆ ಅರ್ಧ ರಾಜ್ಯವನ್ನು ತೆತ್ತು ಹಿಂದಿರುಗಿದನು. ಆದರೆ ತನ್ನನ್ನು ಗೆದ್ದ ಅರ್ಜುನನೊಡನೆ ಬಂಧುತ್ವವನ್ನು ಬೆಳೆಸಬೇಕೆಂದೂ ತನ್ನನ್ನು ಅವಮಾನಗೊಳಿಸಿದ ದ್ರೋಣರನ್ನು ಕೊಲ್ಲಬೇಕೆಂದೂ ಅವನ ಮನಸ್ಸಿನಲ್ಲಿ ಕಡೆಯುವದಕ್ಕಾರಂಭವಾಯಿತು. ಈ ಉದ್ದೇಶವನ್ನು ನೆರವೇರಿಸಿಕೊಳ್ಳುವದಕ್ಕಾಗಿ ಅವನು ಯಾಜನೆಂಬ ಮುನಿಯ ನೆರವನ್ನು ಪಡೆದು ಯಜ್ಞವನ್ನು ಮಾಡಿದನು. ಆಗ ಅವನಿಗೆ ಅದರಿಂದ ಒಂದು ಗಂಡೂ ಒಂದು ಹೆಣ್ಣೂ ದೊರೆತವು. ಆ ಹೆಣ್ಣೇ ಚಂದ್ರನಂತೆ ಹೊಳೆಯುತ್ತ ಪಾಂಚಾಲದೇಶದವರ ತೊಡೆಯ ಮೇಲೆಲ್ಲ ಆಡಿದ ದ್ರೌಪದಿ. ಆ ಗಂಡೇ ಕಾಲರುದ್ರನಂತೆ ಕೋಪದಿಂದ ಕೂಡಿದ ಮುಖವುಳ್ಳ ಧೃಷ್ಟದ್ಯುಮ್ನನು.

## ಅರಗಿನ ಮನೆಯ ಬೇಗೆ

ಧರ್ಮರಾಯನು ಬಹಳ ಗುಣವಂತನಾದ್ದರಿಂದ ಧೃತರಾಷ್ಟ್ರನು ಅವನನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಗಿಂತ ಚೆನ್ನಾಗಿ ಕಾಣುತ್ತಿದ್ದನು. ಅವನು ಪ್ರಾಯದವನಾಗುತ್ತಲೆ ಧೃತರಾಷ್ಟ್ರನು ಅವನನ್ನು ಬಂಗಾರದ ಪೀಠದ ಮೇಲೆ ಕೂಡಿಸಿ ಶಾಸ್ತ್ರಪದ್ಧತಿಯಂತೆ ಪಟ್ಟಾಭಿಷೇಕವನ್ನು ಮಾಡಿದನು. ಇದರಿಂದ ಜನರೆಲ್ಲರ ಆನಂದಕ್ಕೆ ಪಾರವೇ ಇಲ್ಲವಾಯಿತು. ಧರ್ಮರಾಯನ ಆಳಿಕೆಯು ಪ್ರಜೆಗಳಿಗೆಲ್ಲ ಅಚ್ಚುಮೆಚ್ಚಾಯಿತು. ಇದನ್ನು ನೋಡಿ ಧೃತರಾಷ್ಟ್ರನೂ ಸಂತೋಷಗೊಂಡನು. ಆದರೆ ಧರ್ಮರಾಯನ ಅಧಿಕಾರಸಂಪತ್ತು ಸಮುದ್ರಗಳನ್ನು ಕೂಡ ದಾಟಿ ಹೋಗುವದಕ್ಕೆ ಮೊದಲಾದ್ದರಿಂದ ಅದನ್ನು ಸಹಿಸುವದು ದುರ್ಯೋಧನ ಮೊದಲಾದವರಿಗೆ ಸಾಧ್ಯವಾಗಲಿಲ್ಲ. ಇದರಿಂದ ಅವರು ತಂದೆಯ ಬಳಿಯಲ್ಲಿ ತಮ್ಮ ಮೂಗಿನ ನೇರಕ್ಕೆ ಮಾತಾಡಿ ಪಾಂಡವರಿಗೆ ಉಪಾಯದಿಂದ ಹಾನಿಯುಂಟುಮಾಡುವ ಯೋಚನೆ

ಯನ್ನು ನಡೆಸಿದರು. ಇದುವರೆಗೆ ಹೊರಗಣ್ಣಿನಲ್ಲಿ ಮಾತ್ರ ಕುರುಡ ನಾಗಿದ್ದ ಧೃತರಾಷ್ಟ್ರನು ಮಕ್ಕಳ ಮೇಲಿನ ಮೋಹದಿಂದ ಈಗ ತನ್ನ ಒಳಗಣ್ಣನ್ನೂ ಕಳೆದುಕೊಂಡನು. ದುರ್ಯೋಧನನ ಬೊಟ್ಟೆಯು ತುಪ್ಪ ದಲ್ಲಿ ಬಿತ್ತು. ಧೃತರಾಷ್ಟ್ರನು ಆಗ ಧರ್ಮರಾಯನನ್ನು ಕರೆದು—'ವಾರ ಣಾವತಿಯೆಂಬೂರಿಗೆ ಹೋಗಿ ಒಂದು ದೇವತಾಸೇವೆಯನ್ನು ಮುಗಿಸಿ ಕೊಂಡು ಬಾ'-ಎಂದು ಶಿರೋದೇಶವನ್ನು ಮಾಡುವಂತೆ ಹೇಳಿದನು.

ದೊಡ್ಡಪ್ಪನ ಅಪ್ಪಣೆಯನ್ನು ಮೀರುವದು ಧರ್ಮರಾಯನ ಮನ ಸ್ಸಿಗೆ ಬರತಕ್ಕ ಮಾತೇ ಅಲ್ಲ. ಒಡನೆ ಅವನು ಧೃತರಾಷ್ಟ್ರನ ಮಾತನ್ನು ತನ್ನ ತಲೆಯಮೇಲೆ ಹೊತ್ತು ತಮ್ಮಂದಿರೊಡನೆ ವಾರಣಾವತಿ ಯೆಂಬ ಪಟ್ಟಣಕ್ಕೆ ಪ್ರಯಾಣ ಮಾಡಿದನು. ಇಷ್ಟರೊಳಗೆ ದುರ್ಯೋಧನನು ಅಲ್ಲಿ ತಕ್ಕ ಒಂದು ಸನ್ನಾಹವನ್ನು ಮಾಡಿದ್ದನು. ಅವನ ಮಂತ್ರಿಯಾದ ಪುರೋಚನನೆಂಬುವನು ಅವರಿಗಾಗಿ ಒಂದು ಅರಗಿನ ಮನೆಯನ್ನು ಸಿದ್ಧಮಾಡಿಕೊಂಡಿದ್ದು ಅವರು ಬರುತ್ತಲೇ ಅವರಿಗೆ ಕಾಣಿಸಿಕೊಂಡು ಅವರನ್ನು ಬಹು ವಿನಯದಿಂದ ಅಲ್ಲಿ ಇಳಿಸಿದನು. ಪಾಂಡವರು ಹೊಸ ಲೋಕವನ್ನು ಸೇರುವಂತೆ ಆ ಹೊಸ ಮನೆಯಲ್ಲಿ ಬಿಡಾರವನ್ನು ಮಾಡಿದರು. ದುರ್ಯೋಧನನು ಈ ಕೇಡನ್ನು ಬಗೆದಿದ್ದರೂ ಧರ್ಮಾತ್ಮ ರಾದ ಪಾಂಡವರಿಗೆ ದೈವಸಹಾಯವಿತ್ತು. ಕೌರವರು ಈ ನೆವದಿಂದ ತಮ್ಮ ಹೊಟ್ಟೆಯ ಕಿಚ್ಚನ್ನು ತೀರಿಸಿಕೊಳ್ಳುವ ಉಪಾಯವನ್ನು ಹೂಡಿ ರುವರೆಂಬ ಮಾತು ಸಾತ್ತ್ವಿಕಪ್ರಿಯರಾದ ಕೆಲವು ದೂತರಿಂದ ಪಾಂಡವರ ಕಿವಿಗೆ ಬಿತ್ತು. ಈ ಅಭಿಪ್ರಾಯವು ತಮಗೆ ತಿಳಿದಿರುವ ದೆಂಬುದನ್ನು ತೋರಿಸಿಕೊಳ್ಳದೆ ಪಾಂಡವರು ತಮ್ಮ ಎಚ್ಚರದಲ್ಲಿ ತಾವಿ ದ್ದರು. ಘಾತಕನಾದ ಪುರೋಚನನು ತನ್ನ ಒಡೆಯನ ಉಪ್ಪಿನ ಬೆಲೆ ಯಾಗಿ ಅರಗಿನ ಮನೆಗೆ ಅಗ್ನಿಪ್ರತಿಷ್ಠೆಯನ್ನು ಮಾಡುವದಕ್ಕೆ ತಕ್ಕ ಕಾಲವನ್ನು ಕಾಯುತ್ತಿದ್ದನು.

ಇಷ್ಟರಲ್ಲಿ ಪಾಂಡವರ ಏಳಿಗೆಯನ್ನು ನೋಡಿ ಸಹಿಸಲಾರದೆ ಒಳಗೇ ಕುದಿಯುತ್ತಿದ್ದ ದುರ್ಯೋಧನನು ಅವರ ಆಹಾರದ ಪದಾರ್ಥಗ

ಳಲ್ಲಿ ವಿಷವನ್ನು ಬೆರೆಸಹೇಳಿ ಅಲ್ಲಿಗೆ ಒಬ್ಬ ಬೇಡರವಳನ್ನು ಕಳುಹಿಸಿದನು. ಅವಳು ತಾನೊಬ್ಬ ಒಕ್ಕಲಗಿತ್ತಿಯೆಂದು ಹೇಳಿಕೊಂಡು ಐದು ಜನ ಮಕ್ಕಳೊಂದಿಗೆ ಬಂದು ಆ ಅರಗಿನ ಮನೆಯಲ್ಲಿ ನಿಂತಳು. ಪುರೋಚನನು ಸಮಯವನ್ನು ಸಾಧಿಸುವದಕ್ಕೆ ಮೊದಲು ಅವನಿಗೂ ಆ ಬೇಡರವಳಿಗೂ ಅವರ ಕರ್ಮಫಲವನ್ನುಣಿಸಬೇಕೆಂದು ಆ ದಿನ ಭೀಮನು ತನ್ನ ತಾಯಾದ ಕುಂತಿಯನ್ನೂ ಅಣ್ಣನಾದ ಧರ್ಮರಾಯನನ್ನೂ ತಮ್ಮಂದಿರನ್ನೂ ಅವರೆಲ್ಲರೂ ಮೈಮರೆತು ನಿದ್ರಿಸುತ್ತಿದ್ದಾಗ ಅವರು ಮಲಗಿದ್ದ ಮಂಚದೊಡನೆ ಎತ್ತಿ ಕಂಕುಳಲ್ಲಿರಿಕಿಕೊಂಡು ತಾನೇ ಆ ಮನೆಗೆ ಬೆಂಕಿಯನ್ನು ಹಚ್ಚಿ ತಮಗಾಗಿ ಅಲ್ಲಿ ಮಾಡಿದ್ದ ಸುರಂಗದ ಮಾರ್ಗವಾಗಿ ಹೊರಬಿದ್ದನು. ಒಡನೆ ಅರಗಿನ ಮನೆಯು ಧಗ್ಗೆಂದು ಹತ್ತಿಕೊಂಡಿತು. ಅಗ್ನಿದೇವನಿಗೆ ಏಳು ನಾಲಿಗೆಗಳೆಂದು ಹೇಳುವರು. ಈಗ ಅವನು ಏಳು ನಾಲಿಗೆಗಳನ್ನೂ ಚಾಚಿ ಪುರೋಚನ, ಬೇಡರವಳು, ಅವಳ ಐದು ಮಕ್ಕಳು—ಈ ಏಳು ಜನರನ್ನೂ ತಿಂದು ತೇಗಿದನು. ಮರುದಿನ ಊರಿನವರೆಲ್ಲ ಅದನ್ನು ನೋಡಿ ಪಾಂಡವರ ಹಾನಿಯಾಯಿತೆಂದು ತಿಳಿದು ಸುರಿಸಿದ ಕಣ್ಣೀರು ಆ ಬೇಗೆಯನ್ನು ನಂದಿಸಿತು. ಹೀಗೆ ಜಗತ್ತಿನವರೆಲ್ಲರೂ ದುಃಖದಿಂದ ಕಣ್ಣೀರು ಸುರಿಸುತ್ತಿರುವಾಗ ಈ ಸುದ್ದಿಯನ್ನು ಕೇಳಿದ ದುರ್ಯೋಧನನು ಆನಂದಬಾಷ್ಪದ ಕೋಡಿಯನ್ನು ಹರಿಸಿದನು.

## ಘಟೋತ್ಕಚನ ಹುಟ್ಟು

ಭೀಮನು ಸುರಂಗದಿಂದ ಹೊರಬಿದ್ದಾಗ ಕಗ್ಗತ್ತಲು ಹರಡಿಕೊಂಡಿತ್ತು. ಅದರೊಳಗೆ ನುಗ್ಗಿ ಹೋಗುತ್ತಿದ್ದ ಅವನ ತೊಡೆಗಳ ವೇಗದಿಂದ ಹುಟ್ಟಿದ ಗಾಳಿಯು ಗಿಡಮರಗಳನ್ನೆಲ್ಲ ಬುಡಮೇಲು ಮಾಡುತ್ತಿತ್ತು. ಆ ಮರಗಳ ರೆಂಬೆಗಳಲ್ಲಿದ್ದ ಗೂಡುಗಳಿಗೆಲ್ಲ ಧಕ್ಕೆ ತಗಲಿತು. ಅಲ್ಲಿದ್ದ ಹಕ್ಕಿಗಳೆಲ್ಲ ಗಗನಕ್ಕೆ ಹಾರಿ ಗದ್ದಲವನ್ನು ಮಾಡುತ್ತಿದ್ದವು. ಹೀಗೆ ಸಾಗಿದ ಅವನು ಯಾವದೋ ಒಂದು ಕಾಡಿನಲ್ಲಿ

ಒಂದು ಕೊಳದ ತೀರದಲ್ಲಿದ್ದ ಒಂದು ಮರದ ಕೆಳಗೆ ಅವರನ್ನು ಇಳಿಸಿ ಅವರನ್ನು ಕಾದುಕೊಂಡು ಸ್ವಲ್ಪಹೊತ್ತು ನಿಂತೆನು. ಆಗ ಅವನ ಬಳಿಗೆ ಒಬ್ಬ ಸ್ತ್ರೀ ಬಂದಳು. ಅವಳ ಶರೀರವು ಮಿಂಚಿನಂತೆ ಹೊಳೆಯುತ್ತಿತ್ತು. ಅವಳು ತಾನಾಗಿ ಹೇಳಿದ್ದೇನೆಂದರೆ:—

"ಈ ಅಡವಿಯನ್ನೆಲ್ಲ ಹಿಡಿಂಬನೆಂಬ ರಾಕ್ಷಸನು ತನ್ನ ತೋಳಬಲದಿಂದ ಆಳುತ್ತಿರುವನು. ಮನುಷ್ಯರನ್ನು ತಿನ್ನುವ ರಾಕ್ಷಸರಲ್ಲೆಲ್ಲ ಅವನು ಮೇಲುಗೈಯವನು. ನಾನು ಅವನ ತಂಗಿ. ನನ್ನ ಹೆಸರು ಹಿಡಿಂಬಿ. ಇಂಥ ಈ ಸ್ಥಲದಲ್ಲಿ ಹೆದರದೆ ನಿಂತಿರುವೆಯಲ್ಲ! ನಿನ್ನ ಧೈರ್ಯವು ಎಂಥದ್ದು! ನಿಮ್ಮ ರಕ್ತವನ್ನು ಕುಡಿಯಬೇಕೆಂದಿರುವ ಆ ಹಿಡಿಂಬನು ನಿಮ್ಮನ್ನು ಕೊಲ್ಲುವದಕ್ಕಾಗಿ ನನ್ನನ್ನು ಕಳುಹಿಸಿರುವನು. ಆದರೆ ನಿನ್ನ ರೂಪನ್ನು ನೋಡಿದೊಡನೆ ನನಗೆ ನಿನ್ನೊಡನೆ ಪ್ರೇಮವನ್ನು ಬೆಳೆಸಬೇಕೆಂದಿಚ್ಛೆಯಾಗುತ್ತಿದೆ. ಹಿಡಿಂಬನು ಇಲ್ಲಿಗೆ ಬರುವ ಸಮಯವು ಸಮೀಪಿಸುತ್ತಿದೆ. ಆದ್ದರಿಂದ ಈ ಸಮಯಕ್ಕೆ ನಿನಗೆ ತಕ್ಕ ಹಿತವನ್ನು ಹೇಳುತ್ತೇನೆ ಕೇಳು. ಅವನು ಬಹು ಬಲಶಾಲಿಯು. ಅವನೊಡನೆ ಹೋರಾಡುವ ಗೊಡವೆಗೆ ನೀನು ಸಿಲುಕಬೇಡ. ದಯವಿಟ್ಟು ಬೇಗ ನನ್ನ ಕೈಹಿಡಿ. ನಾನು ನಿನ್ನನ್ನು ಬೇಕುಬೇಕಾದ ಕಡೆಗಳಿಗೆ ಎತ್ತಿಕೊಂಡು ಹೋಗಿ ಸುಖಾನುಭವವನ್ನು ಮಾಡುತ್ತೇನೆ."

ಇಷ್ಟು ಮಾತಾಗುವದರೊಳಗೆ ಹಿಡಿಂಬನು ಅಲ್ಲಿಗೆ ಬಂದೇಬಿಟ್ಟನು. ಅವನ ಕಣ್ಣುಗಳು ಕೆಂಡದಂತೆ ಕೆಂಪಾಗಿದ್ದು ಎದುರಿಗೆ ನಿಂತವರನ್ನು ಸುಡುವಂತಿದ್ದವು. ಅವನು ಬಾರಿಬಾರಿಗೂ ಭುಜವನ್ನು ಚಪ್ಪರಿಸಿಕೊಳ್ಳುತ್ತಿದ್ದ ಸದ್ದು ಹತ್ತು ದಿಕ್ಕುಗಳಿಗೂ ತುಂಬಿತ್ತು. ಕಪಿಲಬಣ್ಣದ ಕೂದಲುಗಳು ಅವನ ಮುಖದ ಮೇಲೆ ಹರಡಿಕೊಂಡಿದ್ದವು. ಆಗ ಹಿಡಿಂಬನು "ಎಲೋ ಮೂಢ, ನನ್ನ ಕಾಡಿನಲ್ಲಿ ಮೃತ್ಯುವಿನ ಗಂಟಲೊಳಕ್ಕೆ ನುಗ್ಗಿರುವ ನೀನು ಯಾರು?" ಎಂದು ಆರ್ಭಟಿಸುತ್ತ ಮುಂದಕ್ಕೆ ಬರುತ್ತಲೆ ಭೀಮನು ಅಕಾಲಮೃತ್ಯುವಿನಂತೆ ಅವನಿಗೆ ಎದುರಾದನು. ಅವರಿಬ್ಬರೂ ಹೋರಾಡಿದರು. ಒಬ್ಬನು ಮರ

ವನ್ನು ಮುರಿದು ತಂದರೆ ಇನ್ನೊಬ್ಬನೂ ಅದೇ. ಒಬ್ಬನು ಬೆಟ್ಟವನ್ನು ಬೇರುಸಹಿತೆತ್ತಿ ತಂದರೆ ಇನ್ನೊಬ್ಬನೂ ಅದೇ. ಒಬ್ಬನು ಮುಷ್ಟಿ ಯನ್ನು ಮಾಡಿಕೊಂಡು ಬಂದರೆ ಇನ್ನೊಬ್ಬನೂ ಅದೇ. ಒಬ್ಬನು ಮಾತನ್ನು ಮುಂದುಮಾಡಿದರೆ ಇನ್ನೊಬ್ಬನೂ ಅದೇ. ಹಿಡಿಂಬಿಯು ಬೆರಗಾಗಿ ಇದನ್ನು ನೋಡುತ್ತ ನಿಂತಳು. ಆಗ ಭೀಮನು ತನ್ನ ವಜ್ರ ಮುಷ್ಟಿಯಿಂದ ಹಿಡಿಂಬನ ತಲೆಯನ್ನು ಮುಟ್ಟಿ ಅವನನ್ನು ಯಮರಾಜ ಧಾನಿಯ ನಿವಾಸಿಗಳಲ್ಲಿ ಪ್ರಮುಖನನ್ನಾಗಿ ಮಾಡಿದನು.

ಅಷ್ಟರಲ್ಲಿ ಬೆಳಕು ಹರಿಯಿತು. ಭೀಮನು ಉಳಿದವರೊಂದಿಗೆ ಹಿಡಿಂಬಿಯನ್ನೂ ಕರೆದುಕೊಂಡು ಮುಂದಕ್ಕೆ ಹೊರಟನು. ದಾರಿ ಯಲ್ಲಿ ವ್ಯಾಸರಾಶ್ರಮವು ಸಿಕ್ಕಿತು. ವ್ಯಾಸರು ಇವರನ್ನು ಅಲ್ಲಿ ಕೆಲವು ದಿವಸ ಇರಹೇಳಿದರು. ಅವರು ಅಲ್ಲಿದ್ದಾಗ ಭೀಮನಿಗೆ ಹಿಡಿಂ ಬಿಯ ಹೊಟ್ಟೆಯಲ್ಲಿ ಶೌರ್ಯಧೈರ್ಯಾದಿಗುಣಗಳಲ್ಲಿ ತನಗೆ ಸಮಾನನಾದ ಘಟೋತ್ಕಚನೆಂಬ ಮಗನು ಹುಟ್ಟಿದನು. ಅವನು "ತಂದೆಯವರೆ, ಏನಾದರೊಂದು ಸಮಯ ಬಂದಾಗ ನೀವು ನನ್ನನ್ನು ನೆನೆಸಿದೊಡನೆ ಬಂದು ಎಂಥ ಕಾರ್ಯವನ್ನಾದರೂ ಸಾಧಿಸುತ್ತೇನೆ"– ಎಂದು ಹೇಳಿ ಹೊರಟುಹೋದನು.

## ಬಕಾಸುರನ ಕೊಲೆ

ಕಾಡಿನಲ್ಲಿ ಪ್ರಯಾಣಮಾಡುವಾಗ ಕಂದಮೂಲಗಳನ್ನು ತಿನ್ನುತ್ತ ಹೊರಟ ಪಾಂಡವರು ಅಲ್ಲಿಂದ ಮುಂದೆ ತಮ್ಮನ್ನು ಯಾರೂ ಗುರ್ತಿಸ ದಂತೆ ಬ್ರಾಹ್ಮಣರ ವೇಷವನ್ನು ಧರಿಸಿ ಏಕಚಕ್ರವೆಂಬ ನಗರಕ್ಕೆ ಬಂದರು. ಅಲ್ಲಿ ಅವರು ಬ್ರಾಹ್ಮಣ ಗೃಹಸ್ಥನ ಮನೆಯಲ್ಲಿ ಬಿಡಾರವನ್ನು ಮಾಡಿ ಭಿಕ್ಷಾನ್ನವನ್ನು ತಂದು ಜೀವನಯಾತ್ರೆಯನ್ನು ನಡೆಸುತ್ತ ಬಂದರು. ದೊರೆತ ಭಿಕ್ಷಾನ್ನದಲ್ಲಿ ಅರ್ಧ ಪಾಲು ಭೀಮನಿಗೊಬ್ಬನಿಗೇ ಸಲ್ಲುತ್ತಿತ್ತು. ಅವನು ಅದನ್ನು ಕುತ್ತಿಗೆಯವರೆಗೆ ಚೆನ್ನಾಗಿ ಉಂಡು

ಕೈವೈಗಳಲ್ಲಿ ಪುಷ್ಟನಾದನು. ಅಲ್ಲಲ್ಲಿ ಜನರ ಗುಂಪುಗಳಲ್ಲಿ ಬ್ರಾಹ್ಮಣರು ಪಾಂಡವರ ನಾಶದ ವಿಷಯವನ್ನು ಹೇಳುತ್ತಿದ್ದದ್ದೆಲ್ಲ ಇವರ ಕಿವಿಗೆ ಬೀಳುತ್ತಿತ್ತು. ಸರಿಯಾದ ಸಮಯವು ದೊರೆಯುವವರೆಗೂ ತಾವು ಮರೆಯಾಗಿರುವದುತ್ತಮವೆಂದು ಅವರು ಸುಮ್ಮನಿದ್ದರು. ಇದಲ್ಲದೆ 'ಹಿಡಿಂಬನನ್ನು ಯಾವನೋ ಒಬ್ಬ ಯಕ್ಷನು ಕೊಂದನಂತೆ' ಎಂದು ಹೇಳುತ್ತಿದ್ದದ್ದನ್ನು ಕೇಳಿ ಅಣ್ಣತಮ್ಮಂದಿರೆಲ್ಲರೂ ಭೀಮನ ಮುಖವನ್ನು ನೋಡಿ ನಗುತ್ತಿದ್ದರು.

ಒಂದು ದಿನ ಸಂಜೆಯಾಗಿದೆ. ಆ ಮನೆಯ ಯಜಮಾನಿಯು ಮಗನನ್ನು ತನ್ನ ತೊಡೆಯ ಮೇಲಿಟ್ಟುಕೊಂಡಿದ್ದಾಳೆ. ಅವಳ ಕಣ್ಣೀರುಗಳಿಂದ ಅವನ ತಲೆಯಲ್ಲ ನೆನೆಯುತ್ತಿದೆ. ಗಟ್ಟಿಯಾಗಿ ಅತ್ತರೆ ಬಕಾಸುರನಿಗೆ ತಪ್ಪುಮಾಡಿದಂತಾಗುವದೆಂದು ಆಕೆ ಒಳಗೇ ಕುದಿಯುತ್ತಿದ್ದಾಳೆ. ಆಗ ಕುಂತಿಯು ಆಕೆಯ ಸಮೀಪಕ್ಕೆ ಬಂದು ದುಃಖದ ಕಾರಣವೇನೆಂದು ಕೇಳಿದಳು. ಅದಕ್ಕೆ ಆ ಬ್ರಾಹ್ಮಣಿಯು ಮನೋವ್ಯಥೆಯಿಂದ ಗದ್ಗದಿಸುತ್ತ ಹೇಳಿದ್ದೇನೆಂದರೆ,—"ಅಮ್ಮ; ಈ ನನ್ನ ಮಗನ ಅಲ್ಪಾಯುಸ್ಸಿಗಾಗಿ ನಾನು ಅಳುತ್ತೇನೆ. ಸೂರ್ಯನ ಮಗಳಾದ ಯಮುನೆಯು ತನ್ನ ಅಣ್ಣನಾದ ಯಮನನ್ನು ತನ್ನ ಬಳಿಗೆ ಬರಮಾಡಿಕೊಂಡಿರುವಳೆಂಬಂತೆ ಯಮುನಾನದಿಯ ದಡದಲ್ಲಿರುವ ಕಾಡಿನಲ್ಲಿ ಬಕನೆಂಬ ಭಯಂಕರನಾದೊಬ್ಬ ರಾಕ್ಷಸನು ಬಂದಿದ್ದಾನೆ. ಅವನ ಉರುಬೆಗೆ ಎಲ್ಲರ ನಾಶವೂ ಏಕಕಾಲಕ್ಕೆ ಆಗಬಾರದೆಂದು ಹೆದರಿ ಊರಿನವರೆಲ್ಲ ಅವನೊಡನೆ ಒಂದು ದಿನ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದಾರೆ. ಅದರಂತೆ ದಿನದಿನವೂ ಒಬ್ಬ ಮನುಷ್ಯನೂ ಒಂದು ಅನ್ನರಾಶಿಯೂ ಅವನಿಗೆ ಸಲ್ಲಬೇಕು. ಈ ದಿನದ ಬಲಿಯು ನಮ್ಮ ಮನೆಯಿಂದ ಸಲ್ಲತಕ್ಕದ್ದಾಗಿದೆ. ಈ ಹಾಳು ಬಕಾಸುರನು ಮನುಷ್ಯರಾದರಾಯಿತೆಂದು ಮುದುಕರನ್ನು ನುಂಗಿ ನೀರು ಕುಡಿಯುತ್ತಿದ್ದರೆ ಅದು ನಮ್ಮ ಪುಣ್ಯಕ್ಕೆ ಸರಿಯಾಗಿತ್ತು. ಬಲಿಯಾಗತಕ್ಕ ಮನುಷ್ಯನು ಹುಡುಗನೇ ಆಗಿರಬೇಕೆಂಬ ನಿಯಮವು ನಮ್ಮ ಕುತ್ತಿಗೆಯ ಮೇಲೆ

ಗರಗಸದಂತೆ ಕೊರೆಯುತ್ತಿದೆ. ನಮ್ಮ ವಂಶಕ್ಕೆಲ್ಲ ಇರುವವನು ಈ ಮಗನೊಬ್ಬನೆ. ಇವನನ್ನು ಬೆಳಕು ಹರಿಯುತ್ತಲೆ ಬಲಿಗೊಡಬೇಕಾಗಿದೆಯಲ್ಲ! ಗೆಳತಿ, ಈ ಕಷ್ಟದಿಂದ ಹೇಗೆ ಪಾರಾಗಬೇಕು !! "

ಹೀಗೆ ಹೇಳುವಾಗ ಅವಳ ಕಣ್ಣೀರು ದೊಡ್ಡ ಹೊಳೆಯಾಗಿ ಹರಿಯಿತು. ಆಗ ಕುಂತಿಯು 'ಅಮ್ಮ, ನನ್ನ ಮಗನೊಬ್ಬನಿದ್ದಾನೆ. ಅವನು ನನ್ನ ಮಕ್ಕಳಲ್ಲಿ ಎರಡನೆಯವನಾದರೂ ಯಾರೊಡನಾದರೂ ಕಾದುವವರಲ್ಲಿ ಎಂದಿಗೂ ಎರಡನೆಯವನಲ್ಲ. ಅವನ ಹೆಸರು ಭೀಮ. ಅವನನ್ನು ನಾನು ನಿನಗಾಗಿ ಕೊಡುತ್ತೇನೆ. ಅವನನ್ನು ಬಲಿಯಾಗಿ ಕಳುಹಿಸಿ ನೀನು ನಿನ್ನ ಮಗನನ್ನು ಉಳಿಸಿಕೊಳ್ಳಬಹುದು '- ಎಂದು ಆಕೆಯನ್ನು ಸಂತಯಿಸಿದಳು. ಒಡನೆ ದುಃಖದಿಂದ ಕಣ್ಣೀರಿನ್ನಿಡುತ್ತಿದ್ದ ಆ ದಂಪತಿಗಳ ಕಣ್ಣುಗಳು ಆನಂದದ ನೀರನ್ನು ಸುರಿಸಲಾರಂಭಿಸಿದವು. ಈ ಸುದ್ದಿ ಭೀಮನ ಕಿವಿಗೆ ಬಿತ್ತು. ಆದರೂ ಆ ರಾತ್ರಿ ಅವನು ಆ ಮನೆಯಲ್ಲಿ ಆಗುತ್ತಿದ್ದ ಅಡಿಗೆಯ ಕಡೆಗೆ ದೃಷ್ಟಿ ಇಟ್ಟಿದ್ದನೇ ಹೊರತು ಬಕಾಸುರನ ಭಯಂಕರವಿಚಾರವನ್ನು ಮನಸ್ಸಿಗೆ ತಂದುಕೊಳ್ಳಲೇ ಇಲ್ಲ. ರಾತ್ರಿ ಕಳೆದು ಬೆಳಕು ಹರಿಯಿತು. ಸೂರ್ಯನು ಉದಯಪರ್ವತದ ಶಿಖರವನ್ನೇರಿದನು. ಭೀಮನು ಅನ್ನದ ಬಂಡಿಯನ್ನೇರಿದನು. ಆ ಬಂಡಿಯಲ್ಲಿ ಮೊಸರಿನ ಗಡಿಗೆಗಳೂ ತುಂಬಿದ್ದವು. ಭೀಮನು ಬಕಾಸುರನ ಬಳಿಗೆ ಬಂದದ್ದಾಯಿತು. ಬಕಾಸುರನ ಉಸಿರು ಯಮನ ವಾಹನವಾದ ಕೋಣನಂತೆ ಭೋರ್ಗರೆಯುತ್ತಿತ್ತು. ಎಲ್ಲೆಲ್ಲಿ ನೋಡಿದರೂ ಹದ್ದುಗಳೂ ನರಿಗಳೂ ಬಕಾಸುರನು ಮಾಡುತ್ತಿದ್ದ ಪ್ರಾಣಹಿಂಸೆಯನ್ನು ಹೊಗಳುತ್ತಿರುವಂತೆ ಕೂಗುತ್ತಿದ್ದವು. ಆದರೂ ಭೀಮನು ಎದೆಯಳುಕದೆ ಬಂಡಿಯಲ್ಲಿಯೇ ಇದ್ದು ಅನ್ನದ ಗುಡ್ಡೆಯನ್ನು ಸವೆಸುತ್ತ ಸಿಂಹನಾದವನ್ನು ಮಾಡಿದನು.

ಭೀಮನ ಸಿಂಹನಾದವು ಬಕಾಸುರನ ಕಿವಿಗೆ ಬಿತ್ತು. ಬಲಿಯ ಅನ್ನವನ್ನೂ ಮನುಷ್ಯನನ್ನೂ ಹೊತ್ತ ಬಂಡಿಯು ಆ ದಿನ ಸ್ವಲ್ಪ ತಡವಾಗಿ ಬಂದಿದ್ದದ್ದು ಅವನಿಗಾಗಲೆ ಕ್ರೋಧವನ್ನುಂಟುಮಾಡಿತ್ತು.

ಭೀಮನ ಸಿಂಹನಾದವು ಅದನ್ನು ಇಮ್ಮಡಿಯಾಗಿ ಮಾಡಿತು. ಆಗ ಬಕನು ತನ್ನ ಮಂದಿರವಾದ ಪರ್ವತದ ಗುಹೆಯಿಂದ ಹೊರಬಿದ್ದನು. ಅವನ ಎದೆಯ ಮೇಲೆ ಎದ್ದುಕಾಣುತ್ತಿದ್ದ ರಕ್ತಧಾರೆಗಳು ಬಿರುದುಗಳಂತೆ ಕಂಗೊಳಿಸುತ್ತಿದ್ದವು. ಮನುಷ್ಯರನ್ನು ತಿನ್ನುವ ತವಕದಿಂದ ಅವನ ತುಟಿಗಳು ಮುಂದಾಗುತ್ತಿದ್ದವು. ಅವನ ಹಲ್ಲುಗಳು ಆ ತುಟಿಗಳ ನಡುವೆ ಸಿಕ್ಕುಬಿದ್ದ ಮೂಳೆಗಳಂತಿದ್ದವು. ಹೀಗಿದ್ದ ಬಕನು 'ಹೀಗೆ ನನಗೆ ದ್ರೋಹವನ್ನು ಮಾಡುತ್ತ ನನ್ನನ್ನು ಉಪೇಕ್ಷಿಸುವವನು ಯಾರು?'– ಎಂದು ಗರ್ಜಿಸುತ್ತ ಭೀಮನ ಎದುರಿಗೆ ಓಡಿ ಬಂದನು. ಒಡನೆ ಇಬ್ಬರ ಭುಜಗಳೂ ಒಂದು ಗೂಡಿ ಹೋರಾಡುವದಕ್ಕೆ ಮೊದಲಾದವು. ಭೀಮನ ತೋಳತೆಕ್ಕೆಯಿಂದ ನಲುಗಿ ಬಕನು ಕಣ್ಣನ್ನು ಮೇಲಿಕೆಳಗೆ ಮಾಡಿ ಸತ್ತುಬಿದ್ದನು. ಭೀಮನು ಆ ಹೆಣವನ್ನು ಎಲ್ಲರೂ ನೋಡಲೆಂದು ಊರ ಬಾಗಿಲಿಗೆ ತಂದೆಳೆದು ಒಡನೆ ಆ ರಾಕ್ಷಸನನ್ನು ಮುಟ್ಟಿದ ಮುಡಿಚಟ್ಟನ್ನು ಕಳೆದುಕೊಳ್ಳುವದಕ್ಕಾಗಿ ತಾಯಿಗೆರಗುವದಕ್ಕೆ ಹಿಂದಿರುಗಿ ಬಂದನು. ಊರಿನವರೆಲ್ಲರೂ ಆ ಹೆಣವನ್ನು ನೋಡಿ ಬೆರಗಾಗಿ ಆನಂದದಿಂದ ನ್ಮೈಮರೆತರು. ಅವರೆಲ್ಲರೂ ಆ ಬಕವೈರಿಯನ್ನು ನೋಡುವದಕ್ಕೆ ಬಂದಾಗ ಭೀಮನು ಅವರಿಗೆಲ್ಲರಿಗೂ ವಂದಿಸಿದನು. ಅವರು ಮನಃಪೂರ್ವಕವಾಗಿ ಆಶೀರ್ವಾದಗಳನ್ನು ಮಾಡಿದರು.

## ಚಿತ್ರರಥನ ಸೊಕ್ಕು ಮುರಿದದ್ದು

ಹೀಗೆ ಪಾಂಡವರು ಏಕಚಕ್ರನಗರದಲ್ಲಿರುವಾಗ ಒಂದು ದಿನ ಒಬ್ಬ ದಾರಿಹೋಕನು ಅವರಿದ್ದ ಮನೆಯ ಜಗುಲಿಯ ಮೇಲೆ ರಾತ್ರಿಯೆಲ್ಲಾ ಸುಖವಾಗಿ ಮಲಗಿದ್ದು ಬೆಳಗಾಗುತ್ತಲೇ ಎದ್ದು ಆ ಪಾಂಡವರನ್ನು ನೋಡಿ "ಅನೇಕರಾಜರು ದ್ರುಪದರಾಜನ ಮಗಳಾದ ದ್ರೌಪದಿಗೆ ಮನಸ್ಸನ್ನು ಸೋತವರಾಗಿ ಆಕೆಯ ಸ್ವಯಂವರಮಹೋತ್ಸವಕ್ಕಾಗಿ ದ್ರುಪದನಗರಿಗೆ ಸ್ವಾಲಿಟ್ಟು ಹೋಗುತ್ತಿದ್ದಾರೆ. ಆ ಉತ್ಸವದಲ್ಲಿ

ಮಗಳ ಮೇಲೆ ಹೆಚ್ಚಿನ ಪ್ರೇಮವುಳ್ಳ ದ್ರುಪದನು ಬ್ರಾಹ್ಮಣರಿಗೆ ಸವಿಸವಿಯಾದ ಊಟವನ್ನೂ ಬೇಕಾದಷ್ಟು ಆಕಳುಗಳನ್ನೂ ಕೊಡುತ್ತಾನೆ. ನೀವೂ ಬನ್ನಿ. ನಿಮಗೆ ಮಂಗಲವಾಗುವದು." ಎಂದು ಅವರ ಮನಸ್ಸಿನಲ್ಲಿ ಕುತೂಹಲದ ಬೀಜವನ್ನು ಬಿತ್ತಿದನು. ಪಾಂಡವರು ಒಡನೆ ಅದಕ್ಕೆ ಒಡಂಬಟ್ಟು ಬ್ರಾಹ್ಮಣರ ಗುಂಪಿನಲ್ಲಿ ಸೇರಿ ದ್ರುಪದನ ರಾಜಧಾನಿಯ ದಾರಿಯನ್ನು ಹಿಡಿದರು. ಎಷ್ಟೋ ದಿನಗಳ ಪ್ರಯಾಣವಾಯಿತು. ಎಷ್ಟೋ ದೇಶಗಳನ್ನೂ ಕಾಡುಗಳನ್ನೂ ದಾಟಿದ್ದಾಯಿತು. ಹೀಗೆ ಬರುತ್ತಿದ್ದ ಪಾಂಡವರಿಗೆ ವ್ಯಾಸರು ಕಾಣಿಸಿಕೊಂಡು ಇದರಿಂದ ಏಳಿಗೆಯಾಗಲೆಂದು ಆಶೀರ್ವಾದವನ್ನು ಮಾಡಿದರು. ಪಾಂಡವರ ಪ್ರಯಾಣವು ಮುಂದೆ ಸಾಗಿತ್ತು. ಅವರು ಕತ್ತಲೆಯಲ್ಲಿ ಹೋಗುತ್ತಿದ್ದಾಗ ಬೆಳಕಿಗಾಗಿ ಅರ್ಜುನನು ಗೊರವೀಕಟ್ಟಿಗೆಯ ಕೊಳ್ಳಿಯನ್ನು ಹಿಡಿದುಕೊಂಡಿದ್ದನು. ಹೀಗೆ ಅವರು ಗಂಗಾನದಿಯ ದಡದವರೆಗೆ ಬಂದರು.

ಆಗ ಆ ನದಿಯಲ್ಲಿ ಚಿತ್ರರಥನೆಂಬ ಗಂಧರ್ವನು ನೀರಾಟವನ್ನಾಡುತ್ತಿದ್ದನು. ಅವನ ಸುತ್ತಲೂ ಹೆಂಗಸರು ಗುಂಪಾಗಿ ನೆರೆದಿದ್ದರು. ತನ್ನ ಆಟದ ಕಾಲದಲ್ಲಿ ಬಂದ ಪಾಂಡವರನ್ನು ಕಾಣುತ್ತಲೆ ಚಿತ್ರರಥನ ಕಣ್ಣುಗಳು ಕೆಂಪಾದವು. ಒಡನೆ ಅವನಿಗೂ ಅರ್ಜುನನಿಗೂ ಯುದ್ಧವೇ ಆರಂಭವಾಯಿತು. ಅರ್ಜುನನು ಚಿತ್ರರಥನ ಮೇಲೆ ಆಗ್ನೇಯಾಸ್ತ್ರವನ್ನು ಮಂತ್ರಿಸಿ ಬಿಟ್ಟನು. ಅದರ ಬೇಗೆಯ ಝಳಕ್ಕೆ ಚಿತ್ರರಥನ ತೇರು ಉರಿದು ಗುಡ್ಡೆಯಾಗಿ ಬಿತ್ತು. ಆಗ ಚಿತ್ರರಥನು ಪಾಂಡವರೊಡನೆ ಗೆಳೆತನವನ್ನು ಮಾಡಿಕೊಂಡು ತನ್ನ ಜೀವವನ್ನುಳಿಸಿಕೊಂಡನು.

## ದ್ರೌಪದೀಸ್ವಯಂವರ

ಮುಂದೆ ಪಾಂಡವರಿಗೆ ದಾರಿಯಲ್ಲಿ ಧೌಮ್ಯನೆಂಬ ಒಳ್ಳೆ ಜ್ಞಾನವಿಜ್ಞಾನನಿಧಿಯಾದ ಮುನಿಯ ನೆರವು ದೊರೆಯಿತು. ಆ ಮುನಿಯು

ತನ್ನ ಸವಿಮಾತುಗಳಿಂದ ಪಾಂಡವರಿಗೆ ಸ್ವಯಂವರದ ಕಥೆಗಳನ್ನು ಹೇಳುತ್ತ ಹೊರಟನು. ಇವರ ಭರದಲ್ಲಿ ಮಾರ್ಗಾಯಾಸವೇ ತೋರದೆ ದ್ರುಪದಪಟ್ಟಣವು ಎರಡು ಮೂರು ಹೆಜ್ಜೆಗಳಂತಾಯಿತು. ಪಾಂಡವರಿಗೆ ದ್ರುಪದನಗರಿಯು ಕಾಣಬರುತ್ತಲೆ ಅವರ ಬಲಕಣ್ಣುಗಳು ಹಾರಿದವು. ಊರೊಳಕ್ಕೆ ಹೋದಮೇಲೆ ಅವರು ತಮ್ಮ ಬಿಡಾರಕ್ಕೆ ಒಬ್ಬ ಕುಂಬಾರನ ಮನೆಯನ್ನು ಹೊಂದಿಸಿಕೊಂಡರು.

ಅಷ್ಟರಲ್ಲಿ ಅನೇಕ ರಾಜರು ತಂಡತಂಡವಾಗಿ ಆ ಪಟ್ಟಣಕ್ಕೆ ಬಂದಿಳಿದರು. ಎಲ್ಲಿ ನೋಡಿದರೂ ಹೊಗಳುವ ಭಟ್ಟರು ಬಲದ ತೋಳನ್ನು ಮೇಲಕ್ಕೆತ್ತಿ ತಮ್ಮ ತಮ್ಮ ರಾಜರ ಬಿರುದುಗಳ ಜೋಡಣೆಯುಳ್ಳ ಪದ್ಯಗಳನ್ನು ಗಟ್ಟಿಯಾಗಿ ಹೇಳುತ್ತಿದ್ದರು. ಈ ಸಮಯದಲ್ಲಿ ಶ್ರೀಕೃಷ್ಣನಿಂದ ಕೂಡಿದ ಬಲರಾಮನೂ ಸೇನಾಸಮೇತನಾಗಿ ಚಿತ್ತಯಿಸಿದನು. ಯದುಸೈನ್ಯದ ಧೂಳಿಯು ಭೂಮಿಯನ್ನೂ ಆಕಾಶವನ್ನೂ ಒಂದು ಮಾಡಿಬಿಟ್ಟಿತ್ತು. ಅಲ್ಲದೆ ದುರ್ಯೋಧನನ ಆಗಮನವೂ ಆಯಿತು. ರತ್ನಖಚಿತವಾದ ಕುಂಡಲಗಳನ್ನು ಧರಿಸಿದ್ದ ಅವನು ಕರ್ಣನೊಡನೆಯೂ ತನ್ನ ಪ್ರತಿಬಿಂಬದಂತಿದ್ದ ತೊಂಬತ್ತೊಂಬತ್ತು ತಮ್ಮಂದಿರೊಡನೆಯೂ ವಿರಾಜಮಾನನಾಗಿದ್ದನು. ಸೈನಿಕರ ಭೇರಿಗಳ ಭಾಂಕಾರವು ಹತ್ತು ದಿಕ್ಕುಗಳಿಗೂ ಹರಡಿಕೊಂಡಿತು.

ರಾಜರೆಲ್ಲರೂ ಸ್ವಯಂವರಮಂಟಕ್ಕೆ ಬಂದರು. ಸುತ್ತಲೂ ಅಲಂಕರಿಸಿದ್ದ ಹೂಗಳಿಂದ ಮಂಟಪವು ಘಮಘಮಿಸುತ್ತಿತ್ತು. ರಾಜರೆಲ್ಲರೂ ಮಣಿಮಯವಾದ ದೊಡ್ಡ ಮಂಚಗಳನ್ನು ಹತ್ತಿ ಕುಳಿತುಕೊಂಡರು. ಅಗರುವಿನ ಧೂಪವು ಮಂಟಪದ ಮೇಲುಭಾಗವನ್ನು ಕೂಡ ವ್ಯಾಪಿಸಿತ್ತು. ಬಗೆಬಗೆಯಾದ ವಾದ್ಯಗಳು ಮೊಳಗಿದವು. ದ್ರೌಪದಿಯು ಪಲ್ಲಕ್ಕಿಯಲ್ಲಿ ಕುಳಿತು ಗೆಳತಿಯರೊಡನೆ ಸ್ವಯಂವರಮಂಟಪವನ್ನು ಪ್ರವೇಶಿಸಿದಳು. ಒಡನೆ ಆ ಮಂಟಪಕ್ಕೆ ಪೂರ್ಣಚಂದ್ರನ ಉದಯವಾದಂತೆ ದ್ರೌಪದಿಯ ಮುಖದ ಕಾಂತಿ ಪಸರಿಸಿತು. ಆಗ ರಾಜರೆಲ್ಲರೂ ಕಣ್ಣುಗಳನ್ನು ಚೆನ್ನಾಗಿ ಅಗಲಿಸಿ ನಿಟ್ಟಿಸಿ ನೋಡುವವ

ಕ್ಕಾರಂಭಿಸಿದರು. ಅರ್ಜುನನು ಬ್ರಾಹ್ಮಣರ ನೆರವಿಯಲ್ಲಿದ್ದು ತಾನೂ ದ್ರೌಪದಿಯ ಮೇಲೆ ಕಣ್ಣನ್ನು ಹಾಕಿದನು. ಆಗ ಅವನ ಒಳಗಿನ ಶಕ್ತಿಯು ಹೊರಬೀಳಬೇಕೆಂದಿರುವದನ್ನು ಸೂಚಿಸುವಂತೆ ಅವನ ಬಲದ ಭುಜವದುರಿತು.

ಹೀಗಿರುವಾಗ ಆ ಸಭೆಯಲ್ಲಿ ನಡುವೆ ಧೃಷ್ಟದ್ಯುಮ್ನನು ಬಂದು ಕಾಣಿಸಿಕೊಂಡು ಒಂದು ಧನುಸ್ಸನ್ನೂ ಬಾಣಗಳನ್ನೂ ತಂದು ಮುಂದಿಟ್ಟು ರಾಜರುಗಳನ್ನು ಕುರಿತು “ಎಲೈ ರಾಜರೆ, ಮೇಲೆ ಕಾಣಿಸುತ್ತಿರುವ ಯಂತ್ರವನ್ನು ನೋಡಿರಿ. ಅದನ್ನು ಯಾರು ನೆಲಕ್ಕೆ ಕೆಡಹುವರೋ ಅವರು ಈ ಬಿಲ್ಲಿನ ಹೆದೆಯನ್ನು ಹಿಡಿದಂಥ ತಮ್ಮ ಬಲಕೈಯಲ್ಲಿ ನನ್ನ ತಂಗಿಯ ಕೈಯನ್ನು ಹಿಡಿಯುವರು”– ಎಂದು ಸಾರಿದನು. ಒಡನೆ ಒಬ್ಬರಹಿಂದೊಬ್ಬರು ರಾಜರು ರಭಸದಿಂದ ಬಂದು ತಮ್ಮ ದೇಹವನ್ನು ಬಗ್ಗಿಸಿದ್ದಾಯಿತೇ ಹೊರತು ಹೆದೆಯನ್ನು ಬಗ್ಗಿಸಿದ್ದಾಗಲಿಲ್ಲ. ಹೀಗೆ ರಾಜರೆಲ್ಲರೂ ಕೈಬಿಟ್ಟು ಕುಳಿತ ಮೇಲೆ ಧೃಷ್ಟದ್ಯುಮ್ನನ ಅಭಿಪ್ರಾಯದಂತೆ ಬ್ರಾಹ್ಮಣರ ಗುಂಪಿನಿಂದ ಅರ್ಜುನನೆದ್ದು ಬಂದು ಬಿಲ್ಲನ್ನೆತ್ತಿ ಹಿಡಿದು ಬಾಣವನ್ನು ಹೊಡೆದೇ ಬಿಟ್ಟನು. ರಾಜರೆಲ್ಲರೂ ಬೆರಗಾಗಿ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಆಗ ದ್ರೌಪದಿಯ ಕುತೂಹಲವು ಹೆಚ್ಚಿತು. ಶೂರನಾದ ಅರ್ಜುನನ ಬಾಣದ ಹೊಡೆತದಿಂದ ಆ ಯಂತ್ರವು ತುಂಡಾಗದೆ ಕೆಳಕ್ಕೆ ಬಿತ್ತು. ಆ ಸಮಯದಲ್ಲಿ ದ್ರೌಪದಿಯ ಕಡೆಗಣ್ಣೋಟವು ಅರ್ಜುನನ ಕಡೆಗೆ ಹರಿದಿತ್ತು. ಲಕ್ಷ್ಯಭೇದವಾದೊಡನೆ ದ್ರೌಪದಿಯು ಚಂಪಕಪುಷ್ಪದ ಮಾಲಿಕೆಯನ್ನು ತಂದು ಅರ್ಜುನನ ಕೊರಳಿಗೆ ಹಾಕಿದಳು. ಜಯಶಾಲಿಯಾದ ಅರ್ಜುನನು ಬಂದ ಕೆಲಸವಾಯಿತೆಂದು ದ್ರೌಪದಿಯೊಡನೆ ಆ ಮಂಟಪದಿಂದ ಹೊರಬಿದ್ದನು.

ದುಷ್ಟನಾದ ದ್ರುಪದನು ಸೊಕ್ಕಿನಿಂದ ನಮ್ಮನ್ನು ಲೆಕ್ಕಿಸದೆ ಬಡಹಾರವನಿಗೆ ಮಗಳನ್ನು ಕೊಟ್ಟನೆಂದು ಕೋಪಗೊಂಡು ರಾಜರೆಲ್ಲರೂ ಕೈಮಾಡುವದಕ್ಕೆ ಸಿದ್ಧರಾದರು. ಅವರನ್ನು ನೋಡಿ ಬ್ರಾಹ್ಮಣರು

ತಮ್ಮ ಜಾತಿವಾತ್ಸಲ್ಯದಿಂದ ಬೇಗಬೇಗ ಹೆಗಲಿನ ಮೇಲಿದ್ದ ಯಜ್ಞೋಪವೀತಗಳನ್ನು ಕೊರಳಿಗೆ ಸುತ್ತುಹಾಕಿ ತಮ್ಮ ಆಸನಗಳನ್ನೂ ಯೋಗದಂಡಗಳನ್ನೂ ಹಿಡಿದು ಎದುರಿಸುವವರಂತೆ ಚಪಲತೆಯನ್ನು ತೋರಿಸಿದರು. ಅರ್ಜುನನು ಅವರನ್ನು ನೋಡಿ ನಗುತ್ತ "ನನಗೆ ಆಶೀರ್ವಾದವನ್ನು ಮಾಡಿದರೆ ಸಾಕು; ಮುಂದಿನದನ್ನು ನಾನು ನೋಡಿಕೊಳ್ಳುತ್ತೇನೆ" – ಎಂದು ಹೇಳಿ ಅವರನ್ನೆಲ್ಲ ಹಿಂದಕ್ಕೆ ನಿಲ್ಲಿಸಿ ತನ್ನ ಬಿಲ್ಲಿಗೆ ಹೆದೆಯನ್ನು ಏರಿಸಿದನು. ಒಡನೆ ಆ ಬಿಲ್ಲಿನಿಂದ ಬಾಣಗಳ ಹಿಂಡು ಹೊರಬಿದ್ದು ಎದುರಾಳುಗಳ ಎದೆಯನ್ನು ಗಡಗುಟ್ಟಿಸಿದವು. ಅಷ್ಟರಲ್ಲಿ ಸಂಜೆಯಾಯಿತು. ಅರ್ಜುನನು ದ್ರೌಪದಿಯೊಡನೆ ತನ್ನ ಬಿಡಾರವನ್ನು ಸೇರಿದನು. ಕೈಯಲ್ಲಿ ಬಿಲ್ಲನ್ನು ಹಿಡಿದು ದ್ರೌಪದಿಯೊಡನೆ ಬಂದ ಅರ್ಜುನನು ತನ್ನ ತಾಯ ಅಡಿಗಳಿಗೆರಗಿದಾಗ ಅವನ ಹಣೆಯಲ್ಲಿ ಊರಿ ಬಂದು ಹರಿಯುತ್ತಿದ್ದ ಬೆವರಿನಿಂದ ಆ ಕುಂತಿಯ ಕಾಲು ತೊಳೆದಂತಾಯಿತು. ಆ ಸಮಯದಲ್ಲಿ ಬೆರಗಾದ ಕುಂತಿಯು ಕೂಡ ಕುಂಬಾರರ ಹೆಣ್ಣುಗಳ ನಡುವೆ ಇರುವವಳಾಗಿ ತನಗಾದ ಆನಂದಬಾಷ್ಪದಿಂದ ಅರ್ಜುನನ ತಲೆಗೆ ಅಭಿಷೇಕವನ್ನು ಮಾಡಿದಳು.

ಮರುದಿನ ದ್ರುಪದರಾಜನು ವ್ಯಾಸಮುನಿಗಳ ಸಮ್ಮತಿಯನ್ನು ಪಡೆದು ಪಾಂಡವರೈವರನ್ನೂ ಮನೆಗೆ ಕರೆದುಕೊಂಡು ಬಂದು ಅವರೈವರಿಗೂ ದ್ರೌಪದಿಯನ್ನು ವಿಧಿಪ್ರಕಾರವಾಗಿ ಮದುವೆಯನ್ನು ಮಾಡುವ ಸಡಗರವನ್ನು ನಡೆಸಿದನು. ಆಗ ಅಂತಃಪುರದ ಸ್ತ್ರೀಯರು ದ್ರೌಪದಿಯನ್ನು ಅಲಂಕಾರಶಾಲೆಗೆ ಕರೆದುಕೊಂಡು ಹೋಗಿ ಅಲಂಕರಿಸಿದರು.

ಪಾಂಡವರೈವರೂ ಶುಭವಾದ ಮುಹೂರ್ತದಲ್ಲಿ ಮರಕತದ ಮಣಿಗಳನ್ನು ಕೆತ್ತಿದ್ದ ಮೆಟ್ಟಿಲುಗಳಿಂದ ಮದುವೆಯ ಜಗುಲಿಯನ್ನೇರಿದರು. ಅಲ್ಲಿ ಪುರೋಹಿತರು ವಿವಾಹಕ್ಕೆ ಬೇಕಾದ ಉಪಕರಣಗಳನ್ನೆಲ್ಲ ಒದಗಿಸಿಟ್ಟಿದ್ದರು. ಜಗುಲಿಯ ಸುತ್ತಲೂ ದೀಪಗಳು ಬೆಳಗುತ್ತಿದ್ದವು. ಮಂತ್ರದಲ್ಲಿ ನಿಪುಣರಾದ ಪುರೋಹಿತರು ಮಂತ್ರವನ್ನು ಹೇಳುವದಕಾಾರಂಭಿಸಿದರು. ಬಗೆಬಗೆಯಾದ ವಾದ್ಯಗಳ ಘೋಷವೂ ಮೊದಲಾಯಿತು.

ಕುಲಸ್ತ್ರೀಯರು ಸ್ವಭಾವಸುಂದರಳಾದ ದ್ರೌಪದಿಯನ್ನು ಕರೆದು ಕೊಂಡು ಬಂದು ಪಾಂಡವರ ಸಮೀಪದಲ್ಲಿ ಕೂಡಿಸಿದರು. ಪುರೋಹಿತರಾದ ಧೌಮ್ಯರ ಎದುರಲ್ಲಿದ್ದ ಅಗ್ನಿಯು ಪ್ರಜ್ವಲಿಸುವದಕ್ಕಾರಂಭಿಸಿತು. ವೇದವಿಧಿಯೆಲ್ಲ ನಡೆದ ಮೇಲೆ ಧರ್ಮರಾಯ ಮೊದಲಾದವರು ದ್ರೌಪದಿಯೊಡನೆ ಅಗ್ನಿಯನ್ನು ಪ್ರದಕ್ಷಿಣೆ ಮಾಡಿದರು. ಈ ಪ್ರಕಾರ ದ್ರೌಪದಿಯ ಪಾಣಿಗ್ರಹಣವನ್ನು ಮಾಡಿ ಪಾಂಡವರು ಸಂತುಷ್ಟರಾದರು. ದ್ರುಪದನು ಮಗಳಿಗೂ ಅಳಿಯಂದಿರಿಗೂ ಬೇಕುಬೇಕಾದಷ್ಟು ಬಳುವಳಿಗಳನ್ನು ಕೊಟ್ಟನು.

ದ್ರೌಪದಿಯನ್ನು ಮದುವೆಯಾದವರು ಪಾಂಡವರೆಂದು ತಿಳಿಯುತ್ತಲೆ ಶಕುನಿಯ ತಂಗಿಯಾದ ಗಾಂಧಾರಿಯ ಹೊಟ್ಟೆಯಲ್ಲಿ ಹುಟ್ಟಿದ ದುರ್ಯೋಧನ ಮೊದಲಾದವರು ತಲೆತಿರುಗಿದವರಾಗಿ ದ್ರೌಪದಿಯನ್ನು ಎತ್ತಿಕೊಂಡು ಹೋಗಬೇಕೆಂದು ಎತ್ತುಗಡೆಯನ್ನು ಹೂಡಿದರು. ಈ ವಿಷಯವಾಗಿ ಅವರವರಲ್ಲಿಯೇ ಮಾತುಕಥೆಗಳಾದವು. ಗುರುದಕ್ಷಿಣೆಗಾಗಿ ದ್ರುಪದನನ್ನು ಹಿಡಿಯುವದಕ್ಕೆ ಬಂದು ಮೊದಲೇ ಕೈಸೋತು ಓಡಿಹೋಗಿದ್ದ ದುರ್ಯೋಧನನು ಈಗ ಮತ್ತೆ ಕೆರಳಿ ಕದನವನ್ನಾರಂಭಿಸಿದನು. ರಣವಾದ್ಯಗಳಾಗಲಿ ದ್ರುಪದನ ರಾಜಧಾನಿಯಲ್ಲೆಲ್ಲ ಗಿಟ್ಟಿಗಿರಿದವು. ದ್ರುಪದನ ಸೇನೆಯೂ ಎದೆಗೊಡುವದಕ್ಕೆ ಸಿದ್ಧವಾಯಿತು. ಅದರ ಹಿಂದೆ ಪಾಂಡವರೂ ರಥದ ಮೇಲೆ ಕುಳಿತು ಬಂದರು. ಎಲ್ಲರೂ ತಲೆ ಮೂಗುವಂತೆ ಯುದ್ಧವು ನಡೆಯಿತು. ಎಲ್ಲೆಲ್ಲಿ ನೋಡಿದರೂ ಧನುಷ್ಟಂಕಾರ; ಎಲ್ಲೆಲ್ಲಿ ನೋಡಿದರೂ ಭಟರ ಗರ್ಜನೆ. ಈ ಗದ್ದಲದಲ್ಲಿ ಕರ್ಣನ ಕೈಮೇಲಾಗಿ ಪಾಂಚಾಲರೆಲ್ಲರೂ ಕಾಲಿಗೆ ಬುದ್ಧಿಯನ್ನು ಹೇಳುವ ಹೊತ್ತು ಬಂದಿತು. ಆಗ ಅರ್ಜುನನು ತನ್ನ ಬಿಲ್ಲಿನ ಝೇಂಕಾರವನ್ನು ಮಾಡಿ ಮುಂದೆ ಬಂದನು.

ಅರ್ಜುನನ ಬಿಲ್ಲಿನಿಂದ ಹೊರಟ ಬಾಣಗಳು ಹಗೆಗಳ ಕವಚಗಳನ್ನು ಸೀಳಿ ಮರ್ಮಗಳನ್ನು ಭೇದಿಸಿದವು. ಅವುಗಳ ಉರುಬೆಗೆ ದುರ್ಯೋಧನ ಮೊದಲಾದವರ ಮೈ ಕಟ್ಟುಬೆವರಿಟ್ಟಿತು. ಆಗ ಅವನ

ಕಡೆಯವರೆಲ್ಲ ಕೈಲಿದ್ದ ಆಯುಧಗಳನ್ನೆಲ್ಲ ಅಲ್ಲಲ್ಲಿಯೇ ಬಿಸಾಟು ಎಡಗೈ ಯಲ್ಲಿ ಜೀವವನ್ನು ಹಿಡಿದುಕೊಂಡು ಹಸ್ತಿನಾಪಟ್ಟಣದ ಕಡೆಗೆ ಓಡಿದರು. ಇತ್ತ ಪಾಂಡವರು ಮಾವನ ಮನೆಗೆ ಹಿಂದಿರುಗಿ ಅವನಿಂದ ಸತ್ಕಾರವನ್ನು ಹೊಂದಿದರು. ಅರಗಿನ ಮನೆಯು ಬೇಗೆ ಮೊದಲು ಗೊಂಡು ಕೌರವರ ಪಲಾಯನದವರೆಗಿನ ವೃತ್ತಾಂತವೆಲ್ಲ ಧೃತರಾಷ್ಟ್ರನ ಕಿವಿಗೆ ಬಿತ್ತು. ಆಗ ಅವನು ವಿದುರನ ಮೂಲಕವಾಗಿ ಪಾಂಡವರನ್ನು ತನ್ನ ಬಳಿಗೆ ಕರೆಸಿಕೊಂಡು ಕೃಷ್ಣನೆದುರಿಗೇ ತನ್ನ ರಾಜ್ಯವನ್ನು ಸರಿಯಾದ ಎರಡು ಭಾಗವಾಗಿ ಮಾಡಿ ಒಂದನ್ನು ತನ್ನ ಮಕ್ಕಳಿಗೂ ಇನ್ನೊಂದನ್ನು ಪಾಂಡವರಿಗೂ ಕೊಟ್ಟನು.

## ದ್ರೌಪದಿಯ ಉಪಭೋಗದ ಹಂಚಿಕೆ

ಕೌರವರಿಗೂ ಪಾಂಡವರಿಗೂ ರಾಜ್ಯವನ್ನು ಹಂಚಿದ ಮೇಲೆ ಧರ್ಮರಾಯನು ಇಂದ್ರಪ್ರಸ್ಥದಲ್ಲಿದ್ದು ಆಳಿಕೊಂಡಿರಬೇಕೆಂದು ಗೊತ್ತಾಯಿತು. ಶ್ರೀಕೃಷ್ಣನನ್ನು ಮುಂದುಮಾಡಿಕೊಂಡು ಪಾಂಡವರು ಅಲ್ಲಿಗೆ ಹೊರಟರು. ಇಂದ್ರಪ್ರಸ್ಥದ ಪ್ರಾಂತವು ಹಿಂದೆ ದೊಡ್ಡ ಅರಣ್ಯವಾಗಿತ್ತೆಂದೂ ಶಿಲ್ಪಶಾಸ್ತ್ರದಲ್ಲಿ ಪಾರಂಗತನಾದ ವಿಶ್ವಕರ್ಮನೆಂಬ ದೇವತೆಗಳ ಬಡಗಿಯು ಆ ನಗರವನ್ನು ನಿರ್ಮಿಸಿದನೆಂದೂ ಹೇಳುತ್ತಾರೆ. ಆಕಾಶದಲ್ಲಿ ನೋಡುತ್ತಿರುವ ವಿಮಾನಗಳೆಂಬಂತೆ ಅಲ್ಲಿಯ ಉಪ್ಪರಿಗೆಯ ಮನೆಗಳು ಮುಗಿಲು ಮುಟ್ಟಿದ್ದವು. ಕೃಷ್ಣನು ಕೆಲವು ಕಾಲ ಪಾಂಡವರೊಡನೆ ಅಲ್ಲಿ ವಾಸಮಾಡಿ ಆಮೇಲೆ ತನ್ನೂರಿಗೆ ಹೊರಟನು.

ಇತ್ತ ಒಂದು ದಿನ ನಾರದರು ಅಲ್ಲಿಗೆ ಬಂದು ಕಾಣಿಸಿಕೊಂಡರು. ಅವರು ಮಹಾಮುನಿಗಳು. ಅವರ ಉಡಿಗೆಯೂ ಹೊದಿಕೆಯೂ ಎರಡೂ ಜಿಂಕೆಯ ಚರ್ಮ. ಅವರ ಕೈ ಯಾವಾಗಲೂ ವೀಣೆಯ ಮೇಲೆ. ನಾರದರು ಬರುತ್ತಲೆ ಅವರ ವೀಣಾನಾದವು ಧರ್ಮರಾಯನ ಸಭೆಯನ್ನೆಲ್ಲ ತುಂಬಿಬಿಟ್ಟಿತು. ಧರ್ಮರಾಯನು ಬಹು ವಿನಯದಿಂದ ಅವರ

ಪಾದಗಳ ಮೇಲೆ ತನ್ನ ಹಣೆಯನ್ನೂ ಹೂವಿನ ಮಾಲೆಯನ್ನೂ ಅರ್ಪಿಸಿ ಅವರಿಗೆ ಕುಳಿತುಕೊಳ್ಳುವದಕ್ಕೆ ಪವಿತ್ರವಾದ ದರ್ಭೆಯ ಚಾಪೆಯನ್ನು ಕೊಟ್ಟನು. ನಾರದರ ದರ್ಶನದಿಂದ ಪಾಂಡವರಿಗೆ ಅತಿಶಯವಾದ ಆನಂದವಾಯಿತು. ಅದರ ಜೊತೆಗೆ ಅವರು ಬಂದ ಕಾರಣವೇನೆಂಬು ದನ್ನರಿಯುವ ಕುತೂಹಲವೂ ಹೆಚ್ಚಾಯಿತು. ಅಷ್ಟರಲ್ಲಿ ದ್ರೌಪ ದಿಯು ಬಂದು ನಮಸ್ಕರಿಸಿದಳು. ಅವಳು 'ನಮಸ್ಕರಿಸುತ್ತೇನೆ' – ಎಂದಾಗ ಆ ಮಾತಿನ ಮಾಧುರ್ಯವನ್ನು ನೋಡಿ ನಾಚಿಗೆಗೊಂಡಂತೆ ವೀಣೆ ಸುಮ್ಮನಾಯಿತು.

ಹಿಂದೆಯೇ ಪರಿಜನರು ಪೂಜಾದ್ರವ್ಯಗಳನ್ನು ತಂದರು. ಧರ್ಮ ರಾಯನು ತನ್ನ ಹೆಂಡತಿಯೊಡನೆ ಅವರಿಗೆ ವಿಧಿಪ್ರಕಾರವಾಗಿ ಪೂಜೆ ಯನ್ನು ಮಾಡಿದನು. ಅಷ್ಟರಲ್ಲಿ ನಾರದರ ಇಂಗಿತವನ್ನರಿತು ಧರ್ಮ ರಾಯನು ಕಣ್ಣುಮಿಸುಕುತ್ತಲೆ ಕಂಚುಕಿಗಳು ಕೈಯಲ್ಲಿ ಹಿಡಿದಿದ್ದ ದಂಡಗಳನ್ನು ಬೀಸುತ್ತ ಸಭಾಸದರನ್ನು ಹೊರಕ್ಕೆ ಕಳುಹಿಸಿದರು. ಆ ಏಕಾಂತದಲ್ಲಿ ನಾರದರು ಹೇಳಿದ್ದೇನೆಂದರೆ:— "ನೀವು ಅರಗಿನ ಮನೆಯ ಬೇಗೆಯಿಂದ ಪಾರಾದದ್ದೂ ಸಾಕ್ಷಾದ್ರತಿಯಂತಿರುವ ದ್ರೌಪದಿಯನ್ನು ಮದುವೆಯಾದದ್ದೂ ಎರಡೂ ಬಹಳಸಂತೋಷವನ್ನುಂಟು ಮಾಡಿವೆ. ಈ ಸಂದರ್ಭದಲ್ಲಿ ನೀವು ತಿಳಿಯಬೇಕಾದ ವಿಷಯವೊಂ ದಿದೆ. ನೀವು ತಾನಾಗಿಯೇ ಹೊಳೆಯುವ ಬುದ್ಧಿಯುಳ್ಳವರು. ನಿಮಗೆ ಮತ್ತೊಬ್ಬರು ಉಪದೇಶಮಾಡಬೇಕಾದದ್ದಿಲ್ಲ. ಆದರೆ ತಮಗೆ ಬೇಕಾದ ವನಾದರೊಂದು ಮಾತು ಹೇಳಬೇಕಾಗಿರುವಾಗ ಬಾಯಿ ಹೊಲಿದು ಕೊಂಡಿರುವದೆಂಬುದು ಹೆಚ್ಚಿನ ವ್ಯಥೆ. ಲೋಕದಲ್ಲಿ ಒಬ್ಬ ಹೆಂಡತಿ ಯನ್ನು ಅನೇಕ ಗಂಡಂದಿರು ಅನುಭವಿಸುವದೆಂಬುದು ನಡೆವಳಿಕೆಯ ಲ್ಲಿಲ್ಲ. ನಿಮ್ಮಲ್ಲಿ ಮಾತ್ರ ಅದು ಕಂಡುಬಂದಿದೆ. ಒಂದೇ ವಸ್ತುವನ್ನು ಅನೇಕರು ಭೋಗಿಸಲಪೇಕ್ಷಿಸುವದಾದರೆ ಆ ಅನೇಕರು ಎಷ್ಟು ವಿವೇಕ ಶಾಲಿಗಳಾಗಿದ್ದರೂ ಅವರಿಗೆ ಸಾಯುವವರೆಗೂ ಒಬ್ಬರಿಗೊಬ್ಬರಿಗೆ ಹೋರಾ ಟವು ತಪ್ಪಿಟ್ಟ ಗಂಟೆಂದು ಹೇಳುತ್ತಾರೆ. ಪೂರ್ವದಲ್ಲಿ ಅಣ್ಣತಮ್ಮಂ

ದಿರಾದ ಸುಂದೋಪಸುಂದರೆಂಬುವರು ತಿಲೋತ್ತಮೆಯೆಂಬ ಒಬ್ಬ ಅಪ್ಸರಸ್ತ್ರೀಯಲ್ಲಿ ಕಾಮುಕರಾದರು. ಆದರೆ ಅವರು ತಮ್ಮತಮ್ಮೊಳಗೆ ಹೋರಾಡಿ ಯಮಲೋಕಕ್ಕೆ ಹೋಗಿ ಮುಟ್ಟಬೇಕಾಯಿತು. ಇದರ ಗಾಳಿ ನಿಮಗೆ ಬೀಸದೆ ಇರಲಿ. ”

ಹೀಗೆಂದು ಅವರು ಆಡಿದ ಮಾತು ಧರ್ಮರಾಯ ಮೊದಲಾದವರಿಗೂ ಹಿತಕರವಾಗಿ ತೋರಿತು. ಆಗ ಪಾಂಡವರು ಆ ನಾರದರೆದುರಿನಲ್ಲಿಯೇ ಪ್ರತಿಜ್ಞೆಯನ್ನು ಮಾಡಿದ್ದೇನೆಂದರೆ:— “ ಒಬ್ಬಳನ್ನು ಹೆಂಡತಿಯಾಗುಳ್ಳ ಈ ನಾವು ಐವರು ಈ ದ್ರೌಪದಿಯನ್ನು ಒಬ್ಬೊಬ್ಬರು ಒಂದೊಂದು ವರ್ಷದಂತೆ ನಿಯಮದಿಂದ ಅನುಭವಿಸುತ್ತೇವೆ. ನಮ್ಮಲ್ಲಿ ಒಬ್ಬರು ದ್ರೌಪದಿಯೊಡನೆ ಇರುವದನ್ನು ಇನ್ನೊಬ್ಬರು ನೋಡಿದರೂ ಕೂಡ ಅವರು ಆ ಪಾಪದ ಪರಿಹಾರಕ್ಕಾಗಿ ಕೃಷ್ಣಾಜಿನವನ್ನು ಹೊಸ್ಸು ಎಂಟು ದಿಕ್ಕುಗಳಲ್ಲಿಯೂ ಪುಣ್ಯತೀರ್ಥಗಳನ್ನು ಸುತ್ತುತ್ತ ಒಂದು ವರ್ಷವನ್ನು ಕಳೆಯುತ್ತೇವೆ. ”

ಈ ಮಾತು ಕಿವಿಗೆ ಬೀಳುತ್ತಲೆ ಸಂತುಷ್ಟರಾದ ನಾರದರು ತಮ್ಮ ಸಂತೋಷದ ಸೂಚಕವಾಗಿ ವೀಣೆಯ ಮೇಲೆ ಕೈ ಆಡಿಸುತ್ತ ದೇವಲೋಕಕ್ಕೆ ಹೋದರು. ಇತ್ತ ಪಾಂಡವರು ತಮ್ಮ ಪ್ರತಿಜ್ಞೆಯ ಪ್ರತ್ಯಕ್ಷರವನ್ನೂ ಪಾಲಿಸಿಕೊಂಡಿದ್ದರು.

## ಅರ್ಜುನನ ತೀರ್ಥಯಾತ್ರೆಯ ಕಾರಣ

ಹೀಗಿರುವಾಗ ಒಂದುದಿನ ಆ ಇಂದ್ರಪ್ರಸ್ಥ ನಗರದಲ್ಲಿ ಒಬ್ಬ ಬ್ರಾಹ್ಮಣನು ಅರಸನ ಅರಸುತನಕ್ಕೆ ಕೂಡ ಉಪ್ಪು ಹಾಕದೆ ಎರಡು ಕೈಗಳನ್ನೂ ಮೇಲಕ್ಕೆತ್ತಿಕೊಂಡು “ ನನ್ನ ಗೋವುಗಳನ್ನೆಲ್ಲ ಕಳ್ಳರು ಕದ್ದಿದ್ದಾರಲ್ಲ ! ಇನ್ನು ನಾನು ಹೇಗೆ ಬಾಳುಮಾಡಲಿ? ಎಲೈ ಯುಧಿಷ್ಠಿರನೆ, ಕೈಲಾಗದೆಂದು ಆಳುವದನ್ನು ಬಿಟ್ಟುಬಿಡಬಾರದೆ ? ”— ಎಂದು ಬಾಯಿಮಾಡುತ್ತ ಬಂದನು. ಆಗ ಅರ್ಜುನನು ಅವನ ಕಾಲಿಗೆ ಅಡ್ಡಬಿದ್ದು “ ಎಲೈ

ಬ್ರಾಹ್ಮಣನೆ, ದಯವಿಟ್ಟು ನಿನ್ನ ಸೇವಕನೆಂದು ನನ್ನನ್ನು ನೋಡುತ್ತ ಕ್ಷಣಹೊತ್ತು ತಡೆದುಕೊ. ನಿನ್ನ ಹಸುಗಳು ಈಗಲೇ ಕೊಟ್ಟಿಗೆಗೆ ಬರುವವು "– ಎಂದು ಅವನನ್ನು ಸಮಾಧಾನಪಡಿಸಿ ಆ ಕಳ್ಳರ ಹುಟ್ಟಡಗಿಸುವದಕ್ಕಾಗಿ ಆಯುಧವನ್ನು ತೆಗೆದುಕೊಳ್ಳಬೇಕೆಂದು ಒಂದು ಕೋಣೆಗೆ ಅವಸರದಿಂದ ನುಗ್ಗಿದನು. ಅವನ ದುರ್ದೈವದಿಂದ ಧರ್ಮರಾಯನು ಅಲ್ಲಿ ದ್ರೌಪದೀದೇವಿಯೊಡನೆ ಇದ್ದನು. ಅರ್ಜುನನು ಅವರನ್ನು ನೋಡಿದ್ದಾಯಿತು. ಆಗ ಅವನು ಆಯುಧವನ್ನು ತೆಗೆದುಕೊಂಡು ಒಡನೆ ಮಾಡಬೇಕಾಗಿದ್ದ ಕೆಲಸಕ್ಕಾಗಿ ಹೊರಬಿದ್ದು ಕಳ್ಳರನ್ನು ಅಡಗಿಸಿ ಅವರಿಗೆ ತಕ್ಕ ಬುದ್ಧಿಯನ್ನು ಕಲಿಸಿ ಆಕಳ ಹಿಂಡನ್ನು ಹಿಮ್ಮೆಟ್ಟಿಸಿದನು. ಆಗ ಆ ಬ್ರಾಹ್ಮಣನ ಮನಸ್ಸಿನ ದುಃಖವೂ ಹಿಮ್ಮೆಟ್ಟಿತು. ಆದರೆ ಅರ್ಜುನನು ಹೆಂಡತಿಯೊಡನೆ ಇದ್ದ ಧರ್ಮರಾಯನನ್ನು ಕಂಡ ದೋಷದ ಪರಿಹಾರಕ್ಕಾಗಿ ತೀರ್ಥಯಾತ್ರೆಗೆ ಹೊರಟು ಅಣ್ಣನಿಗೆ ಅಪ್ಪಣೆ ಕೇಳುತ್ತಿರೆ ತಮ್ಮನ ಅಗಲಿಕೆಯನ್ನು ತಡೆಯಲಾರದೆ ಅವನ ಕಣ್ಣು ಸುರಿಸಿದ ನೀರಿನಿಂದ ಅರ್ಜುನನಿಗೆ ಮೊದಲನೇ ತೀರ್ಥಸ್ನಾನವಾಯಿತು.

## ಉಲೂಪಿಯ ಜೊತೆ

ಧೀರನಾದ ಅರ್ಜುನನು ಅಣ್ಣನ ಅಪ್ಪಣೆಯನ್ನು ಪಡೆದು ಉತ್ತರ ದಿಕ್ಕಿನ ದಾರಿಯನ್ನು ಹಿಡಿದನು. ಆಗ ಗಂಗಾನದಿಯು ಸಿಕ್ಕಿತು. ಅವನು ಅಲ್ಲಿ ಸ್ನಾನಕ್ಕೆ ಇಳಿದಾಗ ಆ ನೀರಿನಲ್ಲಿದ್ದ ಉಲೂಪಿಯೆಂಬ ನಾಗಕನ್ನೆಯು ಅರ್ಜುನನನ್ನು ನೋಡಿದಳು. ಅತಿಸುಂದರನಾಗಿದ್ದ ಅವನಿಗೆ ತಾನು ಪತ್ನಿಯಾಗಬೇಕೆಂದು ಉಲೂಪಿಗೆ ಬಯಕೆಯುಂಟಾಯಿತು. ಈ ಉದ್ದೇಶದಿಂದ ಅವಳು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ತನ್ನ ಉದ್ದೇಶವನ್ನು ಮುಗಿಸಿಕೊಂಡಳು. ಆಗ ಅವನಿಗೆ ಇರಾವಾನ್ ಎಂಬ ಮಗನು ಹುಟ್ಟಿದನು.

## ಬಭ್ರುವಾಹನನ ಹುಟ್ಟು

ಅಲ್ಲಿ ಒಂದು ರಾತ್ರಿ ಇದ್ದ ಅರ್ಜುನನು ಮರುದಿನ ನೇಪಾಳಕ್ಕೆ ಬಂದು ಅಲ್ಲಿ ನೆರೆದಿದ್ದವರಿಗೆ ತನ್ನ ವೃತ್ತಾಂತವನ್ನು ಹೇಳಿ ತನ್ನ ಸ್ನಾನಾ

ಹ್ನಿಕಗಳನ್ನು ತೀರಿಸಿ ಜಪತಪಗಳನ್ನು ಮಾಡಿ ಹಿಮವತ್ಪರ್ವತಕ್ಕೆ ಹೋದನು. ಆ ಪರ್ವತದಲ್ಲಿ ಶಿವನು ಮನ್ಮಥನನ್ನು ಹಣೆಗಣ್ಣಿನಿಂದ ಸುಟ್ಟ ದ್ದನ್ನೂ ಯಮನನ್ನು ಪಾದದಿಂದ ಮೆಟ್ಟಿದ್ದನ್ನೂ ತ್ರಿಪುರಗಳನ್ನು ಪುಡಿ ಗುಟ್ಟಿದ್ದನ್ನೂ ಸಿದ್ಧದಂಪತಿಗಳು ಹಾಡುತ್ತಿರುವದು ಅವನ ಕಿವಿಗೆ ಬಿತ್ತು. ಈಶ್ವರನ ವಾಹನವಾದ ವೃಷಭವು ಓಡಾಡಿದ ಗುರ್ತಾಗಿ ಆದರ ತೀಕ್ಷ್ಣವಾದ ಗೊರಸುಗಳ ತುಳಿತದಿಂದ ಅಲ್ಲಲ್ಲಿ ನೆಲವೆಲ್ಲ ಅರ್ಧಚಂದ್ರಾಕೃತಿಯಿಂದ ತುಂಬಿತ್ತು. ಅದು ಮೆಲುಕುಹಾಕಿದಾಗ ಅಲ್ಲಲ್ಲಿ ಉದುರಿದ ನೊರೆಯ ಚೂರುಗಳು ನಕ್ಷತ್ರಗಳಂತಿದ್ದವು. ಆ ತಪ್ಪಲಿನಲ್ಲಿದ್ದ ಸರೋವರದಲ್ಲಿ ಮುಳುಗಿ ಅವನು ತನ್ನ ಪಾಪವನ್ನು ಕಳೆದುಕೊಂಡನು. ಆನೆಗಳು ಮುರಿದುಹಾಕಿದ ದೇವದಾರುವೃಕ್ಷದ ಕೊಂಬೆಗಳಲ್ಲಿದ್ದ ಹೂಗಳಿಂದ ಆ ಪ್ರಾಂತವೆಲ್ಲ ಘಮಘಮಿಸುತ್ತಿತ್ತು. ಅದನ್ನೆಲ್ಲ ತಿರುಗಿದ ಮೇಲೆ ಅವನು ಪೂರ್ವದಿಕ್ಕಿಗೆ ಹೊರಟನು.

ಆಗ ಮಹೇಂದ್ರಪರ್ವತವು ಸಿಕ್ಕಿತು. ಅಲ್ಲಿರುವ ಸರಸ್ಸುಗಳಲ್ಲೆಲ್ಲ ಕೇದಗೆಯ ಧೂಳು ಮುಚ್ಚಿಕೊಂಡಿತ್ತು. ತನ್ನ ತಂದೆಯ ಹೆಸರಿನ ಆ ಪರ್ವತವನ್ನು ಅವನು ಬಹುಕಾಲ ಸೇವಿಸಿದನು. ಅರ್ಜುನನು ಇಂದ್ರಪ್ರಸ್ಥವನ್ನು ಬಿಟ್ಟು ಹೊರಟ ಮುಹೂರ್ತವು ನಾಲ್ಕು ದಿಕ್ಕು ಗಳಲ್ಲಿಯೂ ವಿವಾಹಲಾಭವನ್ನು ಮಾಡಿಕೊಡುವಂಥದ್ದಾಗಿದ್ದರೂ ಆ ಪೂರ್ವದಿಕ್ಕು ತನ್ನ ತಂದೆಯಾದ ದೇವೇಂದ್ರನ ಹೆಂಡತಿಯೆಂಬ ಭಾವ ನೆಯನ್ನು ತಂದುಕೊಂಡು ಅಲ್ಲಿ ಅದಕ್ಕೆ ಅವಕಾಶವು ದೊರೆಯ ದಂತೆ ಇದ್ದನು.

ಆಮೇಲೆ ದಕ್ಷಿಣದ ಮೇಲೆ ಕಣ್ಣುಬಿತ್ತು. ಝುರ್‌ಝುರ್ ಎಂದು ನಾರುಬಟ್ಟೆಗಳ ಶಬ್ದಗಳನ್ನು ಮಾಡುವ ತಾಳೀ ಮರಗಳ ಸಾಲುಹಿಡಿದು ಅವನು ಸಮುದ್ರತೀರದ ಮಾರ್ಗವಾಗಿ ಹೊರಟನು. ಸಮುದ್ರವು ಕಣ್ಣಳತೆಯನ್ನು ಮೀರಿ ಹೋಗಿತ್ತು. ಆ ಮಾರ್ಗದಲ್ಲಿ ಅವನು ಬರು ವಾಗ ಅವನ ರೂಪವು ಚೋಳದೇಶದ ಸ್ತ್ರೀಯರ ಕಣ್ಣುಗಳಿಗೊಂದು ಹಬ್ಬವಾಯಿತು. ಆ ಚೋಳದೇಶದಲ್ಲಿ ಕಾವೇರಿಯ ನೀರನ್ನು ತುಂಬಿ

ಕೊಂಡು ತೆಂಗಿನಮರಗಳು ಮುಗಿಲುಮುಟ್ಟುವಂತೆ ಬೆಳೆದಿದ್ದವು. ಆ ಸಮುದ್ರತೀರದ ವಾಸದಿಂದ ಅರ್ಜುನನ ಮೈಗೆ ಶೀತವಾಯಿತು. ಆದ್ದರಿಂದ ಅವನು ಬಿಸಿಲನ್ನು ಕಾಸಿಕೊಂಡು ಹಾಯಾಗಿರಬೇಕೆಂದು ಉತ್ತರತೀರದಲ್ಲಿ ಪಾಂಡ್ಯರಾಜನು ಆಳುತ್ತಿದ್ದ ಮಣಿಲೂರೆಂಬ ಪಟ್ಟಣಕ್ಕೆ ಬಂದನು.

ಆ ಪಾಂಡ್ಯನಗರದಲ್ಲಿ ರಾಜಪುತ್ರಿಯಾಗಿದ್ದ ಚಿತ್ರಾಂಗದೆಯು ಅರ್ಜುನನನ್ನು ಮೋಹಿಸಿ ಮದುವೆಯಾದಳು. ಅವರಿಬ್ಬರ ವಿವಾಹಕ್ಕೆ ಆ ದೇಶವು ತಕ್ಕದ್ದಾಗಿ ಯಾಲಕ್ಕಿಯ ಬಳ್ಳಿಗೂ ಲವಂಗದ ಗಿಡಕ್ಕೂ ಹಿಪ್ಪಲಿಯ ಬಳ್ಳಿಗೂ ಪಟೀರವೃಕ್ಷಕ್ಕೂ ವೀಳೆಯದೆಲೆಯ ಬಳ್ಳಿಗೂ ಅಡಿಕೆಯ ಮರಕ್ಕೂ ಎಲ್ಲೆಲ್ಲಿಯೂ ದಾಂಪತ್ಯಭಾವದ ವಿಹಾರವನ್ನು ತೋರಿಸುವಂಥದ್ದಾಗಿತ್ತು. ಅಲ್ಲಿ ಚಿತ್ರಾಂಗದೆಯು ಅರ್ಜುನನ ಪ್ರತಿಬಿಂಬದಂತಿದ್ದ ಬಭ್ರುವಾಹನನನ್ನು ಹಡೆದಳು.

## ಸುಭದ್ರೆಯ ಮದುವೆ

ಅಲ್ಲಿ ಕೆಲವು ದಿವಸಗಳಿದ್ದ ಮೇಲೆ ಅರ್ಜುನನು ಮಲಯಪರ್ವತದ ಮಾರ್ಗವಾಗಿ ಹೊರಟನು. ರಾಮನ ಸೇನೆಯ ಕಪಿಗಳು ಆ ಪರ್ವತವನ್ನು ಮುರಿದ ಗುರ್ತಾಗಿ ಆ ತಪ್ಪಲಲ್ಲಿದ್ದ ಕಲ್ಲುಗಳಲ್ಲಿ ಅವರ ಕೈಬೆರಳುಗಳು ಒಡೆದು ಮೂಡಿದ್ದವು. ಅನೇಕ ಹಳ್ಳಗಳೂ ದಿಣ್ಣೆಗಳೂ ಇರುವ ಆ ಪರ್ವತವನ್ನು ದಾಟಿ ಅವನು ಸಮುದ್ರವನ್ನು ಕಂಡನು. ಅಲ್ಲಿ ಶ್ರೀರಾಮನು ಕಟ್ಟಿದ ಸೇತುವೆಯನ್ನು ನೋಡಿ ಅವನು ಚಿತ್ರದ ಬೊಂಬೆಯಂತೆ ಬೆರಗಾಗಿ ನಿಂತನು. ಕಪಿಗಳು ಪರ್ವತಗಳನ್ನು ತಂದು ಸಮುದ್ರದೊಳಕ್ಕೆ ಹಾಕಿದಾಗ ಅದಕ್ಕೆ ತಾಕಿ ಕುರುಡರಾಗಿಯೂ ಕೈ ಇಲ್ಲದವರಾಗಿಯೂ ಕುಂಟರಾಗಿಯೂ ಆದ ನೀರುಮನುಷ್ಯರು ಅಲೆಗಳ ಮೇಲೆ ಕಾಣಿಸಿಕೊಂಡು ಪಾಪಹರವಾದ ಶ್ರೀರಾಮಚರಿತ್ರೆಯನ್ನು ಹಾಡುತ್ತಿದ್ದರು. ಅದನ್ನೆಲ್ಲ ನೋಡುತ್ತ ಅವನು ಪಶ್ಚಿಮಸಮುದ್ರ

ತೀರವಾದ ಗೋಕರ್ಣಕ್ಕೆ ಬಂದನು. ಅಲ್ಲಿ ಅವನು ಆ ಈಶ್ವರನನ್ನು ಚೆನ್ನಾಗಿ ಸೇವಿಸಿ ಧ್ಯಾನಮಾಡಿದನು.

ಅಲ್ಲಿಂದ ಮುಂದೆ ಪ್ರಭಾಸತೀರ್ಥವು ಬಂತು. ಅದರಲ್ಲಿ ಅವನು ಸ್ನಾನವನ್ನು ಮಾಡಿದನು. ಹಿಂದಿನ ತೀರ್ಥಗಳಲ್ಲಿ ಸ್ನಾನಮಾಡಿದಾಗಲೆಲ್ಲ ಅವು ಅವನ ಒಂದೊಂದು ಪಾಪವನ್ನು ಕಳೆದವು. ಸೇತುದರ್ಶನವಾದಾಗಲಂತು ಅವನ ಪಾಪವೆಲ್ಲ ಹುಟ್ಟುಗೆಟ್ಟು ಹೋದದ್ದರಿಂದ ಪ್ರಭಾಸಕ್ಷೇತ್ರವು ಅವನಿಗೆ ಬೇರೊಂದು ಫಲವನ್ನು ಕೊಡಬೇಕಾಯಿತು. ಅವನು ಅಲ್ಲಿರುವಾಗ ಕೃಷ್ಣನ ತಂಗಿಯಾದ ಸುಭದ್ರೆಯ ವೃತ್ತಾಂತವು ಅವನ ಕಿವಿಗೆ ಬೀಳುತ್ತ ಬಂತು. ಅದನ್ನು ಕೇಳುತ್ತ ಕೇಳುತ್ತ ಸುಭದ್ರೆಯ ಸೌಂದರ್ಯಕ್ಕೆ ಅರ್ಜುನನ ಮನಸ್ಸು ಸೋಲುವ ಹೊತ್ತಿಗೆ ಮಳೆಗಾಲವು ತಲೆದೋರಿತು. ಎಲ್ಲೆಲ್ಲಿಯೂ ಹೊಳೆಗಳು ತುಂಬಿಕೊಳ್ಳುತ್ತ ಬರುತ್ತಿರೆ ಹೆಣ್ಣನವಿಲುಗಳು ಕೋಲಾಹಲವನ್ನು ಮಾಡುವದಕ್ಕೆ ಮೊದಲುಮಾಡಿದವು. ದಾರಿಹೋಕರಿಗೆ ಅದೊಂದು ಗಂಡಾಂತರವು ತಲೆ ಎತ್ತಿದಂತಾಯಿತು.

ಇದರಿಂದ ಪ್ರಯಾಣವನ್ನು ನಿಲ್ಲಿಸಿ ಅರ್ಜುನನು ಅಲ್ಲಿದ್ದಾಗ ಶ್ರೀಕೃಷ್ಣನು ತಾನಾಗಿ ಬಂದು ಅವನಿಗೆ ಕಾಣಿಸಿಕೊಂಡನು. ಒಬ್ಬರನ್ನೊಬ್ಬರು ನೋಡಿದಾಗ ಅವರಿಬ್ಬರ ಆನಂದವು ಮಳೆಗಾಲದ ನದಿಯಂತೆ ಉಕ್ಕಿ ಹರಿಯಿತು. ಅರ್ಜುನನ ಇಂಗಿತವನ್ನು ತಿಳಿದು ಅದಕ್ಕೆ ಸಹಾಯಕವಾಗಿ ಶ್ರೀಕೃಷ್ಣನು ಸೂಚಿಸಿದಂತೆ ಅರ್ಜುನನು ಆಗ ಸಂನ್ಯಾಸಿಯ ವೇಷವನ್ನು ಧರಿಸಿ ಒಂದು ಗುಹೆಯಲ್ಲಿ ಅಡಗಿಕೊಂಡನು. ಇಷ್ಟು ಮಾಡಿ ಕೃಷ್ಣನು ದ್ವಾರಕೆಗೆ ಹೋಗುತ್ತಲೆ ಒಬ್ಬ ಮಹಾತ್ಮನಾದ ಸಂನ್ಯಾಸಿಯು ರೈವತಕಪರ್ವತಕ್ಕೆ ಬಂದಿದ್ದಾನೆಂದು ಮುಂತಾಗಿ ವೈದಿಕಬ್ರಾಹ್ಮಣರು ಸುದ್ದಿಯನ್ನು ಹಬ್ಬಿಸಿದರು. ಬಲರಾಮನಿಗೆ ಸಂನ್ಯಾಸಿಗಳೆಂದರೆ ಬಲು ಇಷ್ಟ. ಅವರ ದರ್ಶನವನ್ನು ಮಾಡಿ ಅವರ ಅನುಗ್ರಹದಿಂದ ಶ್ರೇಯಸ್ಸನ್ನು ಪಡೆಯಬೇಕೆಂದು ಅವನಿಗೆ ಕುತೂಹಲವುಂಟಾಯಿತು. ಅವನು ಒಡನೆ ಹೋಗಿ ಆ ಸಂನ್ಯಾಸಿಗಳನ್ನು ಸತ್ಕ

ರಪೂರ್ವಕವಾಗಿ ಕರೆದುಕೊಂಡೇ ಬಂದನು. ಅವನ ಪ್ರವಾಸದ ಕಾಲದಲ್ಲಿ ಉಲೂಪಿ, ಚಿತ್ರಾಂಗದೆ, ಸುಭದ್ರೆ ಎಂಬ ಮೂವರು ಗಂಟುಬಿದ್ದರೆಂಬುದನ್ನು ಸೂಚಿಸುವಂತೆ ಅವನ ಕೈಯಲ್ಲಿ ತ್ರಿದಂಡವು ಶೋಭಾಯಮಾನವಾಗಿತ್ತು. ಒಣಗಿದ ಚಂದನದ ಕೊರಡು ಅವನ ಪಾದುಕೆಯಾಗಿತ್ತು. ಈ ಕಪಟಸಂನ್ಯಾಸಿಗೆ ಯಾದವರೆಲ್ಲರೂ ಬಹು ಭಯಭಕ್ತಿಯಿಂದ ಬಂದೆರಗಿದರು. ಕಪಟನಾಟಕಸೂತ್ರಧಾರಿಯಾದ ಶ್ರೀಕೃಷ್ಣನು ಆ ಸಂನ್ಯಾಸಿಯ ಕಮಂಡಲವನ್ನು ತನ್ನ ಕೈಗೆ ತೆಗೆದುಕೊಂಡು ತಾನು ಮುಂದೆ ದಾರಿಯನ್ನು ತೋರಿಸುತ್ತ ಅರಮನೆಯ ಅಂತಃಪುರಕ್ಕೆ ಕರೆದೊಯ್ದನು. ಬಲರಾಮನು ಅಲ್ಲಿ ಆ ಸಂನ್ಯಾಸಿಯ ಸೇವೆಗಾಗಿ ತನ್ನ ತಂಗಿಯಾದ ಸುಭದ್ರೆಯನ್ನು ಗೊತ್ತುಮಾಡಿದನು.

ಸುಭದ್ರೆಯು ಆದರದಿಂದ ಸತ್ಕರಿಸುತ್ತ ಬಂದ ಹಾಗೆಲ್ಲ ಆ ಸಂನ್ಯಾಸಿಯು ಹೆಚ್ಚು ಹೆಚ್ಚು ಬಡವಾಗುತ್ತ ಬಂದನು. ಇದಕ್ಕೆ ಕಾರಣವು ತಪಸ್ಸಿನ ಉಗ್ರತೆಯೇನೂ ಅಲ್ಲ; ಸುಭದ್ರೆಯ ಮೇಲಿನ ಬಲವಾದ ಬಯಕೆ. ಅವನು ಉದ್ದವಾಗಿ ನಿಟ್ಟುಸಿರಿಟ್ಟ ಪ್ರತಿಯೊಂದು ಸಲವೂ ಯಾರಾದರೂ ಅವನ ಮೂಗಿನ ಹತ್ತಿರ ಬೆಟ್ಟಿಟ್ಟು ನೋಡಿದರೆ ಅವನ ಪ್ರಾಣಾಯಾಮದ ಪರಮಾವಧಿಯು ಗೊತ್ತಾಗುವಂತಿತ್ತು. ಅವನ ತುಟಿಗಳ ಅಲುಗುವಿಕೆಯು ಪ್ರಣವವನ್ನು ಉಚ್ಚಾರಮಾಡುವದಕ್ಕಾಗಿರದೆ ಸುಭದ್ರೆಗೆ ಮುತ್ತುಕೊಡುವದಾಗಿತ್ತು. ಸುಭದ್ರೆಯು ಚಿಗುರಿನಂಥ ತನ್ನ ಕೈಗಳಿಂದ ಅವನ ಕಾಲುಗಳನ್ನು ಹಿಸುಕುವಾಗ ಅವನ ಮೈಮೇಲೆಲ್ಲ ರೋಮಾಂಚಗಳುಂಟಾಗಲು ಅವನು ಅದಕ್ಕೊಂದು ಬಣ್ಣವನ್ನು ಕೊಡಬೇಕೆಂದು 'ಹರೇ, ಹರೇ, ಮಾಧವ, ವಾಮನ' ಎಂದು ನಟಿಸುತ್ತಿದ್ದನು.

ಒಂದು ದಿನ ಸಂನ್ಯಾಸಿಯು ಭಿಕ್ಷೆಯನ್ನುಂಡು ಜಿಂಕೆಯ ತೊಗಲು ಮೇಲೆ ಕುಳಿತಿದ್ದಾನೆ. ಆಗ ಬೀಸಣಿಗೆಯಿಂದ ಬೀಸುತ್ತಿದ್ದ ಸುಭದ್ರೆಯು ಆ ಏಕಾಂತದಲ್ಲಿ "ತಪಸ್ವಿಗಳೆ, ನಿಮ್ಮ ಬರುವಿಕೆಯಿಂದ ನನಗುಂಟಾಗಿರುವ ಸಂತೋಷವು ಕನ್ಯೆಯಾದ ನನ್ನ ಬಾಯಬೀಗವನ್ನು ಮುರಿದು ಮಾತಾಡಿಸುತ್ತದೆ. ನಿಮ್ಮ ಸೇವೆಯಿಂದ ನನ್ನ ಯದು

ವಂಶವೇ ಕೃತಾರ್ಥವಾಯಿತೆಂದು ತಿಳಿಯುತ್ತೇನೆ. ಭಗವನ್, ತಾವು ಸರ್ವಜ್ಞರು. ನನಗೆ ಮುಂಬಾಗುವ ಶುಭವನ್ನು ತಾವು ಹೇಳಬೇಕು. ಇಂದ್ರಿಯನಿಗ್ರಹವುಳ್ಳ ತಮ್ಮಂಥ ಯತಿಗಳು ತಿಳಿಗಣ್ಣುಳ್ಳವರೆಂದು ನಾನು ಕೇಳಿದ್ದೇನೆ"– ಎಂದು ಪ್ರಶ್ನೆಮಾಡಲು ಆ ಸಂನ್ಯಾಸಿಯು ಸ್ವಲ್ಪ ಹೊತ್ತು ಕಣ್ಣುಮುಚ್ಚಿದವನಾಗಿ ಆಮೇಲೆ "ಹೇ ಸುಭದ್ರೆ, ಬಹಳ ಹೇಳಿ ಏನು ಪ್ರಯೋಜನ? ನಿನಗೆ ಮುಖ್ಯವಾಗಿ ವಿಜಯಪ್ರಾಪ್ತಿಯಾಗುವದು"– ಎಂದುತ್ತರವನ್ನು ಕೊಟ್ಟನು.

ಚಪಲೆಯಾದ ಸುಭದ್ರೆಗೆ ವಿಜಯನೆಂಬುದೊಂದು ಅರ್ಜುನನ ಹೆಸರೆಂದು ತಿಳಿಯದೆ ಇರಲಿಲ್ಲ. ಮೊದಲು ತಾನು ಕೇಳಿದ್ದ ಅವನ ಲಕ್ಷಣಗಳನ್ನೆಲ್ಲ ಆ ಸಂನ್ಯಾಸಿಯಲ್ಲಿ ಕಂಡು ಆಕೆ ಅವನೇ ಅರ್ಜುನನೆಂದು ನಿಶ್ಚಯಿಸಿ ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ನಿಂತಳು. ಆಗ ಅರ್ಜುನನು ತನ್ನ ನಿಜಸ್ವರೂಪವನ್ನು ತೋರಿಸಿ ಒಡನೆ ಅವಳಿಗೊಂದು ಮುತ್ತು ಕೊಟ್ಟನು. ಅದರಿಂದ ಸುಭದ್ರೆಯ ಮೈಮೇಲೆ ರೋಮಾಂಚಗಳಾದವು. ಆ ರಾತ್ರಿಯೇ ಅವರಿಬ್ಬರಿಗೂ ಕೂಡಿಕೆಯಾಯಿತು. ಒಡನೆ ಅರ್ಜುನನು ಬಲರಾಮನಿಗೆ ಅರಿವಿಲ್ಲದಂತೆ ಸುಭದ್ರೆಯೊಡನೆ ರಥಾರೂಢನಾಗಿ ಹೊರಟನು. ಈ ಸುದ್ದಿಯನ್ನು ಕೇಳುತ್ತಲೆ ಯಾದವರು ಯುದ್ಧಕ್ಕೆ ಸನ್ನದ್ಧರಾದರು. ಆಗ ಕೃಷ್ಣನು ಆಗಿ ಹೋದ ಮಾತಿಗೆ ಅದು ಸಲ್ಲದೆಂದು ಮುಂತಾಗಿ ಅವರನ್ನು ಅಲ್ಲಿಯೇ ತಡೆದನು.

ಹೀಗೆ ಅರ್ಜುನನನ್ನು ಪತಿಯಾಗಿ ಪಡೆದು ಧನ್ಯಳಾದ ಸುಭದ್ರೆಯು ಅವನ ಕಪಟಸಂನ್ಯಾಸಿತ್ವವನ್ನು ನೆನೆದು ನೆನೆದು ಹುಸಿನಗೆಯನ್ನು ನಗುತ್ತಿದ್ದಳು. ಆ ಸುಭದ್ರೆಯು ಶೌರ್ಯದಲ್ಲಿ ಅರ್ಜುನನಿಗೆ ಸಮಾನನಾದ ಅಭಿಮನ್ಯುವೆಂಬ ಮಗನನ್ನು ಒಳ್ಳೆ ಮುಹೂರ್ತದಲ್ಲಿ ಹಡೆದಳು. ಅದೇ ಕಾಲದಲ್ಲಿಯೇ ದ್ರೌಪದಿಯೂ ತನ್ನ ಐವರು ಗಂಡಂದಿರನ್ನೂ ಪಿತೃಋಣದಿಂದ ಬಿಡುಗಡೆಮಾಡಿದಳು.

# ಖಾಂಡವವನದ ಬೇಗೆ

ಆಮೇಲೆ ಗ್ರೀಷ್ಮರ್ತು ಬಂತು. ಆಗ ಶ್ರೀಕೃಷ್ಣಾರ್ಜುನರಿಬ್ಬರೂ ಕೂಡಿ ಸ್ತ್ರೀಯರೊಡನೆ ಯಮುನಾನದಿಗೆ ಬಂದರು. ಸ್ವಲ್ಪ ಹೊತ್ತು ದಡದ ಮೇಲೆ ಓಡಾಡಿ ಎಲ್ಲರೂ ನೀರಿನಲ್ಲಿಳಿದರು. ಆಗ ಉಬ್ಬಿದ ನೀರು ದಡದಲ್ಲಿದ್ದ ಮರಳ ದಿಣ್ಣೆಗಳನ್ನೆಲ್ಲ ಮುಚ್ಚಿತು. ಆಗ ಅವರೆಲ್ಲರೂ ಒಬ್ಬರ ಮೇಲೊಬ್ಬರು ನೀರೆರಚುವ ಆಟವನ್ನಾಡಿದರು. ಆಮೇಲೆ ಎಲ್ಲರೂ ದಡಕ್ಕೆ ಬಂದು ವಸ್ತ್ರಾಲಂಕಾರಗಳನ್ನು ಮಾಡಿಕೊಂಡ ದ್ದಾಯಿತು. ಆ ಸಮಯದಲ್ಲಿ ಅಡವಿಯಲ್ಲಿ ಮನಸ್ಸುಬಂದಂತೆ ಓಡಾ ಡುತ್ತಿದ್ದ ಕೃಷ್ಣಾರ್ಜುನರೆದುರಿಗೆ ಒಬ್ಬ ಪುರುಷನು ಕಾಣಿಸಿಕೊಂಡನು. ಅವನ ಮೈಹೊಳಪು ಸೂರ್ಯನ ಹೊಳಪನ್ನು ಕೂಡ ಕಡಿಮೆಯೆಂದೆನಿಸಿ ನೋಡುವವರ ಕಣ್ಣನ್ನು ಮುಚ್ಚಿಸಿಬಿಡುತ್ತಿತ್ತು. ಕೃಷ್ಣಾರ್ಜುನರು ತಮ್ಮ ಶಕ್ತಿಯನ್ನೆಲ್ಲ ಉಪಯೋಗಿಸಿ ಕಣ್ಣನ್ನು ಆರಿದೆರೆದು ನೋಡಿ ದರು. ಅವರಿಗೆ ಒಂದು ಪುರುಷಾಕೃತಿಯು ಕಾಣಬಂತು. ಅವನ ಕೈಯಲ್ಲಿ ನೆರಳು ಬೀಳದೆ ಇರುವ ಕೊಡೆ ಇತ್ತು. ಅವನ ಕಣ್ಣು ಬೆಕ್ಕಿನ ಕಣ್ಣಿನಂತಿತ್ತು. ಕ್ಷಣಕ್ಷಣಕ್ಕೆ ಕಾಣಬರುತ್ತ ಅವನು ಬ್ರಾಹ್ಮ ಣನಾಗಿ ಮುಪ್ಪಿನಿಂದ ನಡುಗುತ್ತಿದ್ದನು. ಅವನನ್ನು ನೋಡಿ ಹೆಂಗ ಸರೆಲ್ಲರೂ ಹೆದರಿ ಅಲ್ಲಲ್ಲಿಯೇ ಹಿಂಜರಿದರು. ಕೃಷ್ಣಾರ್ಜುನರು ಅವನ ಪಾದದ ಮೇಲೆ ಹಣೆಯನ್ನಿಟ್ಟು ನಮಸ್ಕಾರವನ್ನು ಮಾಡಿದರು. ಅವರನ್ನು ಆಶೀರ್ವದಿಸಿ ಆ ಬ್ರಾಹ್ಮಣನು ಅವರನ್ನು ಕುರಿತು “ವೀರರೆ, ಹಸಿವೆಯು ನಿಮ್ಮನ್ನು ನೋಡಿ ಹೆದರಿ ನನ್ನ ಹೊಟ್ಟೆಯೊಳಕ್ಕೆ ಹೊಕ್ಕು ನನ್ನನ್ನು ಬಾಧಿಸುತ್ತಿದೆ. ನನಗೆ ಸಾಕೆನಿಸುವಷ್ಟು ಅನ್ನ ವನ್ನು ನೀಡಬೇಕೆಂದು ಬೇಡುತ್ತೇನೆ”– ಎಂದು ಕೇಳಿಕೊಳ್ಳುವದರೊಳ ಗಾಗಿ ‘ಹಾಗೆಯೇ ಆಗಲಿ’ ಎಂಬ ಮಾತು ಬಂತು.

ಅವರ ಮಾತು ತನಗೆ ಸಿಕ್ಕಿದ ಮೇಲೆ ಆ ಬ್ರಾಹ್ಮಣನು ತಾನು ಅಗ್ನಿದೇವನೆಂದು ತನ್ನ ನಿಜಸ್ವರೂಪವನ್ನು ತಾನೇ ಸಂತೋಷದಿಂದ ತಿಳಿಸಿದನು. ಆ ಮಾತನ್ನು ಕೇಳಿ ಕೃಷ್ಣಾರ್ಜುನರ ಮುಖದಲ್ಲಿ ಹುಸಿ

ನಗೆ ಮೊಳೆದೋರಿತು. ಅವರನ್ನು ಕುರಿತು ಅಗ್ನಿದೇವನು ಆಗ "ರಾಕ್ಷಸರು, ಸರ್ಪಗಳು, ಅಸುರರು– ಮೊದಲಾದವರು ಈ ಖಾಂಡವವೆಂಬ ಅರಣ್ಯದಲ್ಲಿ ಒಟ್ಟುಗೂಡಿಕೊಂಡು ಲೋಕಕ್ಕೆ ತೊಂದರೆಯನ್ನುಂಟು ಮಾಡುತ್ತಿದ್ದಾರೆ. ಇದರಿಂದ ಈ ವನವು ಜಗತ್ತಿಗೆಲ್ಲ ಕುತ್ತಿಗೆಯ ಹುಣ್ಣಿನಂತಾಗಿದೆ. ಇಂದ್ರನು ತಕ್ಷಕನೆಂಬ ನಾಗರಾಜನಿಗೆ ಅಭಯವನ್ನು ಕೊಟ್ಟು ಇಲ್ಲಿಟ್ಟುಕೊಂಡಿದ್ದಾನೆ. ನಿಮ್ಮಿಬ್ಬರ ಬೆಂಬಲದಿಂದ ನಾನು ಒಂದು ಗಳಿಗೆಯೊಳಗೆ ಇದನ್ನು ಬಾಯೊಳಗೆ ಹಾಕಿಕೊಳ್ಳುತ್ತೇನೆ"– ಎಂದು ತನ್ನ ಬಯಕೆಯನ್ನು ಚೆನ್ನಾಗಿ ಹೊರಗೆಡವಿದನು. ಅದಕ್ಕೆ ಒತ್ತಾಸೆಯನ್ನು ಕೊಟ್ಟು ಕೃಷ್ಣನು ಹುಬ್ಬುಹಾರಿಸುತ್ತಲೆ ಅರ್ಜುನನಿಗೆ ಅಗ್ನಿಯಿಂದ ಎರಡು ಬತ್ತಳಿಕೆಗಳೂ ಬಿಳೀ ಕುದುರೆಗಳೂ ಧ್ವಜದ ಸ್ಥಾನದಲ್ಲಿ ಆಂಜನೇಯನಿರುವ ಅತಿಮನೋಹರವಾದ ರಥವೂ ಕೈಸೇರಿದವು. ಅರ್ಜುನನು ಹತ್ತಿದ ಆ ರಥಕ್ಕೆ ಹೂಡಿದ್ದ ನಾಲ್ಕು ಕುದುರೆಗಳು ವಾಯು, ಮನಸ್ಸು, ಬಾಣ, ಗರುಡ– ಇವರನ್ನು ಒಬ್ಬೊಬ್ಬರನ್ನಾಗಿ ಜಯಿಸಿ ಅದರಿಂದ ಸಂಪಾದಿಸಿದ ಕೀರ್ತಿಯ ಮರಿಗಳೆಂಬಂತಿದ್ದುವು. ಅರ್ಜುನನ ರಥದಲ್ಲಿ ಧ್ವಜಪಟದ ಮೇಲೆ ಇದ್ದ ಹನುಮಂತನು ಹಿಂದೆ ತಾನು ರಾವಣನ ಪಟ್ಟಣವಾದ ಲಂಕೆಯಲ್ಲಿ ನೋಡಿದ್ದ ಅಗ್ನಿಯ ಬೇಗೆಯನ್ನು ಮತ್ತೆ ನೋಡುವದಕ್ಕಾಗಿ ಬಂದಿರುವನೆಂಬಂತೆ ಕುಣಿಯುತ್ತಿದ್ದನು. ಅರ್ಜುನನು ಧನುಸ್ಸನ್ನು ಹಿಡಿದು ಸಿದ್ಧನಾಗುತ್ತಲೆ ಅಗ್ನಿಪುರುಷನು ಆ ವನವನ್ನು ಪೂರ್ಣಾಹುತಿಯಾಗಿ ತೆಗೆದುಕೊಳ್ಳುವದಕ್ಕೆಂದು ಬಾಯಿ ತೆಗೆದನು.

ಖಾಂಡವವನದ ಸುತ್ತಲೂ ಉರಿಯೆದ್ದಿತು. ಆ ಸಮಯದಲ್ಲಿ ಮುಂಭಾಗದಲ್ಲಿ ಎದ್ದ ಹೊಗೆಯು ಹೊಂಗೆ ಮೊದಲಾದ ಮರಗಳಲ್ಲಿ ಹಸುರೆಲೆಗಳಂತೆ ಕಾಣುತ್ತಿತ್ತು. ಆಗ ಹಾರಿದ ಅಗ್ನಿಯ ಕಿಡಿಗಳು ತಿಲಕವೇ ಮೊದಲಾದ ಮರಗಳ ಹಣ್ಣಿನ ಬೀಜಗಳಂತೆ ಕಾಣುತ್ತಿತ್ತು. ಆಗ ಆದ ಬೆಳಕು ಮಂದಾರವೇ ಮೊದಲಾದ ವೃಕ್ಷಗಳಲ್ಲಿ ನಾರ

ಬಟ್ಟೆಗಳಂತೆ ಕಾಣುತ್ತಿತ್ತು. ಹೀಗೆ ಸುಡುವಾಗ ಆಗುವ ಚಟಚಟ ತ್ಕಾರಗಳು ಗೂಡುಗಳಿರುವ ಕೆಲವು ಗಿಡಗಳಲ್ಲಿ ಹಕ್ಕಿಗಳ ರೆಕ್ಕೆಗಳು ಒಂದಕ್ಕೊಂದು ಹೊಡೆದಾಡುವ ಸದ್ದಿನಂತಿದ್ದವು.

ಅಗ್ನಿಯ ಭಯದಿಂದ ಮೇಲಕ್ಕೆ ಓಡಿಹೋಗುವ ವನಲಕ್ಷ್ಮಿಯ ಕೆದರಿದ ಕೂದಲಿನಂತೆ ಹೊಗೆಯು ಮುಗಿಲನ್ನು ಮುತ್ತಿತು. ದೇವೇಂದ್ರನನ್ನು ಹುಲ್ಲಿಗಿಂತ ಕಡೆಯಾಗಿ ಕಾಣುವ ಅರ್ಜುನನ ಪರಾಕ್ರಮವನ್ನು ನೋಡಿರೆಂದು ಹೇಳುವಂತೆ ಬಿದಿರ ಮೆಳೆಗಳು ಫಟ್‌ಫಟ್ ಎನ್ನುತ್ತಿದ್ದವು. ಹತ್ತಿರಕ್ಕೆ ಬಂದ ಅಗ್ನಿಯ ಜ್ವಾಲೆಗಳಿಂದ ಎಲಚೀಮರಗಳು ಒಡನೆ ಬಾಡಿ ಅವುಗಳ ಹಣ್ಣುಗಳೆಲ್ಲ ಬೆಳ್ಳಗಾಗುತ್ತಿದ್ದವು. ಹೀಗೆ ಅಗ್ನಿಯು ಆ ವನವನ್ನೆಲ್ಲ ತಿನ್ನುತ್ತ ಬಂದನು.

ಇಂದ್ರನಿಂದ ಅಭಯವನ್ನು ಪಡೆದ ತಕ್ಷಕನೆಂಬ ನಾಗರಾಜನು ಅಲ್ಲಿದ್ದನು. ಅವನನ್ನು ಉಳಿಸುವದಕ್ಕಾಗಿ ಇಂದ್ರನು ಐರಾವತವನ್ನು ಹತ್ತಿ ವಜ್ರಾಯುಧವನ್ನು ಹಿಡಿದು ದೇವಸೇನೆಯೊಡನೆ ಬಂದನು. ಅವನ ಅಪ್ಪಣೆಯಂತೆ ಅಗ್ನಿಯನ್ನು ಆರಿಸುವದಕ್ಕಾಗಿ ಮೋಡಗಳು ಎದೆಗೆಡಿಸುವಂತೆ ಗುಡುಗುತ್ತ ಮುಂದೆ ಬಂದವು. ಬಿರುಮಳೆ ಸುರಿಯುವದಕ್ಕಾರಂಭವಾಯಿತು. ಅಲ್ಲಲ್ಲಿ ಕಾಳ್ಗಿಚ್ಚು ಆರಿ ಕಪ್ಪಾಗುತ್ತ ಬಂತು. ಅದಕ್ಕೆ ತಕ್ಕ ಉಪಾಯವನ್ನು ಮಾಡಲೆಳಸಿ ಅರ್ಜುನನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಆಕಾಶದಲ್ಲಿಯೇ ಬಾಣಗಳ ಮೇಲುಕಟ್ಟೊಂದನ್ನು ಕಟ್ಟಿಬಿಟ್ಟನು. ಆ ಮೇಲುಕಟ್ಟನ್ನೇ ಕೊಡೆಯನ್ನಾಗಿ ಮಾಡಿಕೊಂಡು ಅಗ್ನಿಯು ಮತ್ತೆ ನಿರ್ಭಯದಿಂದ ತನ್ನ ನಾಲಿಗೆಯನ್ನು ಮುಂದಕ್ಕೆ ಹರಿಸಿದನು. ಆಗ ತಕ್ಷಕನು ಆ ಸ್ಥಲವನ್ನು ಬಿಟ್ಟು ಕುರುಕ್ಷೇತ್ರಕ್ಕೆ ಹೋಗಿದ್ದನು. ಅವನ ಹೆಂಡತಿಯು ತನ್ನ ಮಗನಾದ ಅಶ್ವಸೇನನನ್ನು ಪ್ರೀತಿಯಿಂದ ಹೆಗಲ ಮೇಲೆ ಕೂಡಿಸಿಕೊಂಡು ಹೊರಬಿದ್ದಳು. ಬೆಂಕಿಯ ಬೇಗೆಯು ತಡೆಯುವದಕ್ಕಾಗದಷ್ಟಾಯಿತು. ಆಗ ಅವಳು ಹಾರಿ ತಪ್ಪಿಸಿಕೊಳ್ಳಬೇಕೆನ್ನುವಷ್ಟರಲಿ ಅರ್ಜುನನು ತನ್ನ ಬಾಣದಿಂದ ಅವಳನ್ನು ಕತ್ತರಿಸಿದನು. ಆಗ ತಾಯಿ

ಯನ್ನು ಕಳೆದುಕೊಂಡು ಕತ್ತರಿಸಿ ಹೋದ ಬಾಲವುಳ್ಳ ಅಶ್ವಸೇನನನ್ನು ಹೇಗೋ ಇಂದ್ರನು ತೆಗೆದುಕೊಂಡು ಹೋಗಿ ಸಲಹಿದನು.

ಆಮೇಲೆ ಇಂದ್ರನಿಗೂ ಅರ್ಜುನನಿಗೂ ಕೈಕೈಕೂಡಿತು. ಆಗ ಇಂದ್ರನು ಅರ್ಜುನನ ಎದುರಿಗೆ ನಿಲ್ಲಲಾರದೆ ಕಾಲಿಗೆ ಬುದ್ಧಿಯನ್ನು ಹೇಳಬೇಕಾಗಿ ಬಂತು. ಕೃಷ್ಣಾರ್ಜುನರು ಜಯಸೂಚಕವಾಗಿ ತಮ್ಮ ಶಂಖಗಳನ್ನೂದಿದರು. ಇಷ್ಟಾದ ಮೇಲೆ ಅಗ್ನಿಯು ಹೊಟ್ಟೆಯ ಮೇಲೆ ಕೈ ಆಡಿಸಿಕೊಂಡು ನಗುತ್ತ ತನ್ನ ಸ್ಥಾನಕ್ಕೆ ಹೋದನು. ಜಯಶೀಲರಾದ ಕೃಷ್ಣಾರ್ಜುನರು ಮಳೆಯಿಂದ ನೆನೆದುಹೋಗಿದ್ದ ರಥದಲ್ಲಿ ಕುಳಿತುಕೊಂಡು ಧರ್ಮರಾಯನ ಸಮೀಪಕ್ಕೆ ಬಂದರು.

## ರಾಜಸೂಯಯಾಗ

ಆಮೇಲೆ ಶ್ರೀಕೃಷ್ಣನು ತನ್ನ ಊರಿಗೆ ಹೊರಟುಹೋದನು. ಇತ್ತ ಧರ್ಮರಾಯನು ಸಭೆಯಲ್ಲಿದ್ದಾಗ ಒಂದು ದಿನ ನಾರದಋಷಿಗಳು ಬಂದು ರಾಜಸೂಯಯಾಗವನ್ನು ಮಾಡೆಂದು ಹೇಳಿದರು.

ಅಂಥ ದೊಡ್ಡ ಯಜ್ಞವು ತಡೆಯಿಲ್ಲದೆ ಸಾಗುವದಕ್ಕೆ ಕೃಷ್ಣನ ನೆರವು ಅಗತ್ಯವೆಂದು ತಿಳಿದು ಧರ್ಮರಾಯನು ಮತ್ತೆ ಕೃಷ್ಣನನ್ನು ಬರಹೇಳಿ ಕಳುಹಿಸಿದನು. ಕೃಷ್ಣನು ಬಂದ ಮೇಲೆ ಅವನಿಗೂ ಧರ್ಮರಾಯನಿಗೂ ಏಕಾಂತದಲ್ಲಿ ಆಲೋಚನೆ ನಡೆಯಿತು. ಅಲ್ಲಿ ಗೊತ್ತಾದಂತೆ ಧರ್ಮರಾಯನು ತನ್ನ ಕೆಲಸಕ್ಕೆ ಅಡ್ಡಬರಬಹುದಾದ ಜರಾಸಂಧನನ್ನು ಗೆಲ್ಲುವದಕ್ಕಾಗಿ ಭೀಮನನ್ನೂ ಅರ್ಜುನನನ್ನೂ ಶ್ರೀಕೃಷ್ಣನೊಡನೆ ಕಳುಹಿಸಿದನು. ಪ್ರಯಾಣವು ಮಗಧದೇಶದ ಕಡೆಗೆ ನಡೆಯಿತು. ಆ ದೇಶವು ಉಳಿದ ಎಲ್ಲ ದೇಶಗಳಿಗಿಂತಲೂ ಹಣಕಾಸುಗಳಿಂದಲೂ ಕಾಳುಕಡ್ಡಿಗಳಿಂದಲೂ ತುಂಬಿ ತುಳುಕುತ್ತಿತ್ತು. ‘ ಗಿರಿವ್ರಜ ’ ಎಂಬೂರು ಆ ದೇಶದ ರಾಜಧಾನಿಯಾಗಿತ್ತು. ಜರಾಸಂಧನು ಅಲ್ಲಿದ್ದುಕೊಂಡು ಆಳುತ್ತ ಅನೇಕರಾಜರನ್ನು ಸೆರೆಮನೆಯಲ್ಲಿಟ್ಟುಕೊಂಡಿದ್ದನು. ಅವನ

ತೋಳ ಬಲವು ಪ್ರಬಲವಾಗಿದ್ದದ್ದರಿಂದ ಎಲ್ಲ ದಿಕ್ಕಿನ ರಾಜ್ಯಗಳೂ ಅವನ ಕಂಕುಳ ಹಿಡಿತಕ್ಕೆ ಸಿಕ್ಕಿದ್ದರೂ ಇನ್ನೂ ಅವನ ಆಸೆಯೇನೂ ಮುಗಿದಿರಲಿಲ್ಲ. ಅವನೊಡನೆ ಯುದ್ಧವು ಗಂಟುಬಿತ್ತು. ಆಗ ಜರಾಸಂಧನು ಮುಂದೆ ಬಂದು "ಹೇ ಕೃಷ್ಣ, ನೀನು ನನ್ನಿಂದ ಹದಿನೆಂಟು ಸಲ ಸೋತು ಓಡಿಹೋಗಿದ್ದೀಯೆ. ಇನ್ನು ಅರ್ಜುನನು ಹುಡುಗನು" – ಎಂದು ಅವರಿಬ್ಬರನ್ನೂ ತಿರಸ್ಕರಿಸಿ ಭೀಮನಿಗೆ ಇದಿರಾದನು. ಹಿಡಿಂಬನನ್ನೂ ಬಕನನ್ನೂ ಯಮಲೋಕಕ್ಕೆ ಕಳುಹಿಸಿದವನೆಂದು ಎಲ್ಲೆಲ್ಲಿಯೂ ಹೆಸರುಗೊಂಡಿದ್ದ ಭೀಮನು ಅವನೊಡನೆ ಹದಿನೈದು ದಿನಗಳವರೆಗೆ ಹೋರಾಡಿ ಕೊನೆಗೆ ಅವನನ್ನು ನೆಲಾಹಿಡಿಸಿದನು.

ಜರಾಸಂಧನನ್ನು ಗೆದ್ದದ್ದಾದ ಮೇಲೆ ಕೃಷ್ಣನೂ ಭೀಮಾರ್ಜುನರೂ ಇಂದ್ರಪ್ರಸ್ಥಕ್ಕೆ ಹಿಂದಿರುಗಿದರು. ಬಂದ ಕೆಲಸವನ್ನು ಮುಗಿಸಿದ ಕೃಷ್ಣನು ದ್ವಾರಕಿಗೆ ಹೋದನು. ಆಮೇಲೆ ಭೀಮಾರ್ಜುನರೇ ದಿಗ್ವಿಜಯಕ್ಕೆ ಹೊರಟು ನಾಲ್ಕು ದಿಕ್ಕುಗಳನ್ನೂ ಗೆದ್ದುಬಂದರು. ಅವರು ಗೆದ್ದು ತಂದ ಧನಧಾನ್ಯಗಳು ಊರು ಹಿಡಿಸದಷ್ಟಾದವು. ತಮ್ಮ ತಮ್ಮ ಯೋಗ್ಯತೆಗೆ ತಕ್ಕ ಕಾಣಿಕೆಗಳನ್ನು ತೆಗೆದುಕೊಂಡು ಲೆಕ್ಕವಿಲ್ಲದಷ್ಟು ರಾಜರು ಅಲ್ಲಿಗೆ ಬಂದು ತುಂಬಿದರು. ನಕುಲನು ಪಶ್ಚಿಮದಿಕ್ಕನ್ನು ಗೆದ್ದುಬರುವಾಗ ಅವನೊಡನೆ ಅಖಂಡೈಶ್ವರ್ಯದಿಂದ ಕೂಡಿ ಶ್ರೀಕೃಷ್ಣನೂ ಬಂದನು.

ಇಷ್ಟಾಗುತ್ತಲೆ ಧರ್ಮರಾಯನು ಕೃಷ್ಣನ ಅಪ್ಪಣೆಯನ್ನು ಪಡೆದು ಕರ್ಮಕ್ರಮಗಳನ್ನು ತಿಳಿದ ಋತ್ವಿಜರನ್ನು ಸೇರಿಸಿಕೊಂಡು ಯಾಗವನ್ನಾರಂಭಿಸಿದನು. ಯಾಗದಲ್ಲಿ ಮೊದಮೊದಲು ಹೊರಟ ಹೊಗೆಯು ತನ್ನ ಹೊಟ್ಟೆಯಲ್ಲಿ ಅರಗದೆ ಇದ್ದ ಅರಗಿನ ಮನೆಯ ಗೋಡೆಗಳ ಚೂರುಗಳನ್ನು ಅಗ್ನಿಯು ಕಾರುತ್ತಿರುವನೆಂಬಂತಿತ್ತು. ಆಮೇಲೆ ಎಲ್ಲ ದೇವತೆಗಳಿಗೂ ತೃಪ್ತಿಯಾಯಿತು. ಆಗ ಧರ್ಮರಾಯನು ಮಾಡಿದ ದಾನದಿಂದ ಅಲ್ಲಿಗೆ ಬಂದಿದ್ದವರೆಲ್ಲರೂ ಕುಬೇರರಾದರು.

ಆ ರಾಜಸೂಯಶಾಲೆಯು ಅನೇಕ ದೇಶಗಳ ರಾಜರ ಕಿರೀಟಗಳಲ್ಲಿದ್ದ ರತ್ನಗಳ ಕಾಂತಿಯಿಂದ ಬೆಳಗುತ್ತಿತ್ತು. ಆ ಸಭೆಯಲ್ಲಿ ಭೀಷ್ಮನೂ ಧರ್ಮರಾಯನೂ ಸೇರಿ ವಿಚಾರಮಾಡಿ ಶ್ರೀಕೃಷ್ಣನಿಗೆ ಅಗ್ರಪೂಜೆಯನ್ನು ಮಾಡುವಂತೆ ಸಹದೇವನಿಗೆ ಗೊತ್ತುಮಾಡಿದರು. ಕೃಷ್ಣನ ಪಾದವನ್ನು ತೊಳೆಯುವದಕ್ಕಾಗಿ ಸಹದೇವನು ಬಂಗಾರದ ಗಿಂಡಿಯಲ್ಲಿ ನೀರನ್ನು ಹಿಡಿದುಕೊಂಡು ಮುಂದೆ ಬಂದನು. ಕೃಷ್ಣನು ಯಾವದನ್ನೂ ಮನಸ್ಸಿಗೆ ಹಚ್ಚಿಕೊಳ್ಳದೆ ಸುಮ್ಮನೆ ಕುಳಿತಿದ್ದನು. ಸಭೆಯಲ್ಲಿದ್ದ ಜನರು ರೆಪ್ಪೆಯನ್ನು ಕೂಡ ಹೊಡೆಯದೆ ಕೃಷ್ಣನನ್ನು ನೋಡುತ್ತಿದ್ದರು. ಋಷಿಗಳ ನಡುವೆ ಇಂದ್ರನೀಲಮಣಿಯಂತೆ ಶೋಭಿಸುತ್ತಿದ್ದ ಕೃಷ್ಣನ ಬಳಿಗೆ ಬಂದು ಸಹದೇವನು ಪೂಜೆಗಾರಂಭಿಸಿದನು.

ಕೃಷ್ಣನಿಗೆ ಪೂಜೆಯಾದದ್ದು ಎಲ್ಲರಿಗೂ ಸಂತೋಷಕರವಾಗಿತ್ತು. ಆದರೆ ದುರಾತ್ಮನಾದ ಶಿಶುಪಾಲನಿಗೆ ಅದು ಒಗ್ಗಲಿಲ್ಲ. ಅವನಿಗೆ ಒಳಗೇ ಭುಗಿಲೆಂದೆದ್ದ ಕೋಪದಿಂದ ಅವನ ತುಟಿಗಳು ನಡುಗುವದಕ್ಕಾರಂಭಿಸಿದವು. ಶಿಶುಪಾಲನ ಆಗಿನ ಕೋಪವನ್ನು ನೋಡಿದರೆ ಅಗ್ನಿಯು ಯಜ್ಞದ ಜಗುಲಿಯನ್ನು ಬಿಟ್ಟು ಅವನ ಮನಸ್ಸನ್ನು ಹೊಕ್ಕಿದ್ದಂತೆ ಕಾಣಬರುತ್ತಿತ್ತು. ಶಿಶುಪಾಲನು ಕೃಷ್ಣನನ್ನು ಕುರಿತು ಆಡಬಾರದ ಮಾತುಗಳನ್ನಾಡಿದನು. ಆದರೂ ಕೃಷ್ಣನು ಅದರಿಂದ ಎಳ್ಳಷ್ಟೂ ಕೋಪಗೊಳ್ಳಲಿಲ್ಲ. ಅವನು ಆಡುವ ನಿಷ್ಠುರದ ಮಾತುಗಳೆಲ್ಲ ಮುಗಿಯುತ್ತಲೆ ಕೃಷ್ಣನ ಚಕ್ರವು ಬಂದು ಪ್ರಲಯಕಾಲದ ಸೂರ್ಯನ ಜ್ವಾಲೆಯನ್ನು ತೋರಿ ಶಿಶುಪಾಲನ ತಲೆಯನ್ನು ಹಾರಿಸಿಕೊಂಡು ಹೋಯಿತು.

ದುರ್ಬುದ್ಧಿಯಾದ ಶಿಶುಪಾಲನ ಆಯುಸ್ಸೂ ಮುಗಿಯಿತು; ಯಜ್ಞವೂ ಮುಗಿಯಿತು. ಕಾಣಿಕೆಯನ್ನು ಕೊಟ್ಟ ರಾಜರಿಗೆಲ್ಲ ಒಂದಕ್ಕೆರಡರಷ್ಟಾಗಿ ಸತ್ಕಾರಮಾಡಿ ಧರ್ಮರಾಯನು ಅವರನ್ನೆಲ್ಲ ಊರಿಗೆ ಕಳುಹಿಸಿದನು. ಇದೆಲ್ಲ ಮುಗಿದ ಮೇಲೆ ಕೃಷ್ಣನು ದ್ವಾರಕಿಗೆ ಹೋದನು.

# ಜೂಜಾಟ

ರಾಜಸೂಯಯಾಗದ ವೇಳೆಯಲ್ಲಿ ಕಂಡುಬಂದ ಧರ್ಮರಾಯನ ಸಂಪತ್ತನ್ನು ನೋಡಿ ದುರ್ಯೋಧನನು ಒಳಗೇ ಕುದಿದು ಕುದಿದು ತನ್ನ ಸೋದರಮಾವನಾದ ಶಕುನಿಯನ್ನು ಕುರಿತು ಹೇಳಿದ್ದೇನೆಂದರೆ:— "ಮಾವ, ಬಂಗಾರವು ಅಗ್ನಿಯಿಂದ ಹುಟ್ಟಿದ್ದೆಂದು ಜನರು ಹೇಳುತ್ತಾರಷ್ಟೆ. ಆ ಮಾತು ನನ್ನಲ್ಲಿ ತಲೆಕೆಳಗಾಗಿದೆ. ಏಕೆಂದರೆ: ನನ್ನ ಹಗೆಯಾದ ಧರ್ಮರಾಯನಿಗೆ ರಾಜಾಧಿರಾಜರೆಲ್ಲರೂ ಒಪ್ಪಿಸಿದ ಹಣಕಾಸನ್ನು ನೋಡಿ ನನ್ನ ಮನಸ್ಸಿಗೆ ಬೇಗೆ ಹತ್ತಿದೆ. ಇದರ ಮೇಲೆ ಅವನು ಕಟ್ಟಿಸಿಕೊಂಡಿರುವ ಸಭಾಮಂಟಪದ ವೈಭವವು ನನ್ನನ್ನು ಹುಚ್ಚನನ್ನಾಗಿ ಮಾಡಿಬಿಟ್ಟಿತು. ಒಂದು ಕಡೆ ಮಣಿಮಯವಾದ ನೆಲವನ್ನು ನೀರೆಂದು ಭ್ರಮಿಸಿಕೊಂಡೆನು. ಇನ್ನೊಂದು ಕಡೆ ನೀರನ್ನು ನೆಲವೆಂದು ತಪ್ಪುತಿಳಿದುಕೊಂಡೆನು. ಅದನ್ನು ನೋಡಿ ದ್ರೌಪದಿಯು ಗಟ್ಟಿಯಾಗಿ ನಕ್ಕಳು. ಆಗ ಭೂಮಿಯೇ ಬಾಯಿಬಿಟ್ಟರೆ ಅಲ್ಲಿಯೇ ಮರೆಯಾಗಬೇಕೆನಿಸಿತು. ಮಾವ, ಇದರ ಮುಯ್ಯಿ ತೀರಿಸಿಕೊಳ್ಳುವದು ಹೇಗೆ? ಏನಾದರೂ ಮಾಡಿ ನನ್ನ ಹಗೆಗಳಾದ ಪಾಂಡವರಿಗೆ ಹಾನಿಯನ್ನುಂಟುಮಾಡಬೇಕಲ್ಲ!"

ಹೀಗೆಂದು ಹೇಳಿದ ದುರ್ಯೋಧನನ ಮಾತನ್ನು ಕೇಳಿ ಶಕುನಿಯು ತನ್ನಲ್ಲಿಯೇ ಸ್ವಲ್ಪ ಯೋಚನೆಯನ್ನು ಮಾಡಿದನು. ಅವನು ಪಗಡೆಯಾಟದಲ್ಲಿ ತನಗೆದುರಾಳಿಯಿಲ್ಲದಷ್ಟು ನಿಪುಣನಾಗಿದ್ದನು. ಅವನು ತನ್ನ ಮನಸ್ಸಿನಲ್ಲಿ ತೋಚಿದ್ದನ್ನು ಹೇಳಿದ್ದೇನೆಂದರೆ:– "ಮಗು, ಅರ್ಜುನನನ್ನು ಗೆಲ್ಲುವದು ಯುದ್ಧದಲ್ಲಿ ಹೇಗೆ ಸಾಧ್ಯ? ಏಕೆಂದರೆ: ಇಂದ್ರನು ಕೂಡ ಅವನ ಮುಂದೆ ನಿಲ್ಲಲಾರದೆ ಓಡಿಹೋಗಿದ್ದಾನೆ. ಭೀಮನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಗದೆಯನ್ನೆತ್ತಿ ಹಿಡಿದುಕೊಂಡು ನಿಂತರೆ ಜಗತ್ತಿನಲ್ಲಿ ಯಾರು ತಾನೇ ಎದೆಗೊಡಲಾದೀತು. ಬಕ, ಹಿಡಿಂಬ, ಜರಾಸಂಧ– ಮೊದಲಾದವರೇ ಅವನ ಮುಷ್ಟಿಯ ಮುಂದೆ ಮಣ್ಣು ಮುಕ್ಕಿ ಹೋದರು. ತಪೋಮಯವಾದ ಶರೀರವುಳ್ಳ ಧರ್ಮರಾಯ

ದ್ರೌಪದಿಯನ್ನು ಹೀಗೆ ಅವಮಾನಗೊಳಿಸಿದ್ದಕ್ಕಾಗಿ ಸಿಟ್ಟು ಗೊಂಡು ಭೀಮನು ದುರ್ಯೋಧನನೇ ಮೊದಲಾದ ನೂರು ಜನರನ್ನು ನೋಡಿ-ಚಳಿಗಾಲವು ಕಮಲದೆಸಳುಗಳನ್ನು ಕೊಳದಲ್ಲಿ ಈಡಾಡುವಂತೆ-ನಿಮ್ಮ ತಲೆಗಳು ರಣಭೂಮಿಯಲ್ಲಿ ಜಿಗಿದಾಡುತ್ತಿರುವಹಾಗೆ ಮಾಡು ವೆನೆಂದು ಆಣೆಯನ್ನಿಟ್ಟುಕೊಂಡನು. ದುರ್ಯೋಧನನ ಸಭೆಯಲ್ಲಿ ಅವನ ಅಯೋಗ್ಯವಾದ ಮಾತಿಗೆ ಬೆಂಬಲವಾಗಿ ಚಪ್ಪಾಳೆಯನ್ನಿಟ್ಟು ನಕ್ಕದ್ದಕ್ಕಾಗಿ ನಿನ್ನ ಆಯುಸ್ಸನ್ನು ಮುಗಿಸುತ್ತೇನೆಂದು ಅರ್ಜುನನು ಕರ್ಣನನ್ನು ಕುರಿತು ಭಾಷೆಯನ್ನು ಹೊತ್ತನು. ದುರ್ಯೋಧನನು ತನ್ನ ತೊಡೆಯನ್ನು ತಟ್ಟಿ ಅದರ ಮೇಲೆ ಕುಳಿತುಕೊಳ್ಳುವದಕ್ಕೆ ಕರೆದ ಅನುಚಿತವನ್ನು ನೆನೆದು ಮೈಉರಿದವಳಾಗಿ ದ್ರೌಪದಿಯು 'ನಿನಗೆ ನಿನ್ನ ತೊಡೆಯಲ್ಲಿಯೇ ಮರಣವಾಗಲಿ' ಎಂದು ಶಾಪವನ್ನು ಕೊಟ್ಟಳು. ಇದನ್ನು ಕೇಳುತ್ತಲೆ ಧೃತರಾಷ್ಟ್ರಗಾಂಧಾರಿಯರ ಎದೆ ಝಲ್ಲೆಂದಿತು. ಪತಿವ್ರತೆಯ ಮಾತು ಸುಳ್ಳಾಗಲಾರದೆಂದು ಯೋಚಿಸಿ ಆ ಮುದುಕ ತಾಯಿತಂದೆಗಳು ಆ ಅನರ್ಥಕ್ಕೆ ಅವಕಾಶವುಂಟಾಗದಿರುವದಕ್ಕಾಗಿ ಜೂಜಿನಲ್ಲಿ ಗೆದ್ದ ರಾಜ್ಯವನ್ನೆಲ್ಲ ಪಾಂಡವರಿಗೆ ಹಿಂದಕ್ಕೆ ಕೊಡಿಸಿ ಹೇಗೋ ಅವರನ್ನು ಸಮಾಧಾನಮಾಡಿ ಕಳುಹಿಸಿಬಿಟ್ಟರು.

## ವನವಾಸ

ದುರ್ಯೋಧನ ಮೊದಲಾದವರು ಒಡನೆ ಮತ್ತೆ ತಮ್ಮ ದುರಾ ಲೋಚನೆಯನ್ನೆ ಮೆಲುಕುಹಾಕಿ ಜೂಜಿಗಾಗಿ ಮತ್ತೆ ಪಾಂಡವರಿಗೆ ಮಂತ್ರಾಕ್ಷತೆಯನ್ನು ಕಳುಹಿಸಿದರು. ಪಾಂಡವರ ದುರ್ದೈವವು ಅವ ರನ್ನು ಮತ್ತೆ ಹಿಂದಿರುಗಿಸಿತು. ಅರ್ಧ ಹಾದಿಯಲ್ಲಿದ್ದ ಪಾಂಡವರು ಮತ್ತೆ ಬಂದರು. ಧರ್ಮರಾಯನು ಸ್ವಭಾವವಾಗಿ ವಿವೇಕಿಯಾಗಿ ದ್ದರೂ ಕೂಡ ಯಾವದೋ ಒಂದು ಪಿಶಾಚಿಯ ಆವೇಶಕ್ಕೊಳಗಾದವ ನಂತೆ ಶಕುನಿಯೊಡನೆ ಜೂಜಿಗೆ ಕುಳಿತನು. ಶಕುನಿಯು ಸಿದ್ಧಗೊಳಿ ಸಿದ್ದ ದಾಳಗಳು ಶಕುನಿಗೇ ಅನುಕೂಲವಾಗಿ ಬೀಳುವ ಮೋಸಗಾರಿಕೆ

ಯಿಂದ ಕೂಡಿದವುಗಳಾಗಿದ್ದವು. ಸೋತರೆ ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಆ ಸಮಯದಲ್ಲಿ ಗುರ್ತುಹಿಡಿದರೆ ಮತ್ತೆ ಹನ್ನೆರಡು ವರ್ಷಗಳ ವನವಾಸ ಮೊದಲಾದದ್ದನ್ನೂ ಮಾಡುವದಾಗಿ ಮಾತಿಗೆ ಕಟ್ಟುಬಿದ್ದು ಧರ್ಮರಾಯನು ಆ ದಾಳಗಳನ್ನು ಹಾಕಿ ಆಡಿ ತನ್ನ ಸರ್ವಸ್ವವನ್ನೂ ಸೋತನು. ಧರ್ಮರಾಯನದೆಂಬುದೆಲ್ಲ ದುರ್ಯೋಧನನ ಬೊಕ್ಕಸಕ್ಕೆ ಸೇರಿತು. ಪಗೆಗಳ ನೆಲದ ಮೇಲೆ ಒಂದು ಗಳಿಗೆಯೂ ಕಾಲೂರಿರಬಾರದೆಂದು ಧರ್ಮರಾಯನು ತಮ್ಮಂದಿರೊಡನೆಯೂ ದ್ರೌಪದಿಯೊಡನೆಯೂ ಕಾಲುತೆಗೆದನು. ಅದನ್ನು ಸಹಿಸಲಾರದೆ ಆ ಸಮಯದಲ್ಲಿ ಕುಂತಿಯು ಕಣ್ಣೀರು ಸುರಿಸುತ್ತ ಮುಂದೆ ಬಂದಳು. ಧರ್ಮರಾಯನು ಆ ತಾಯ ಯೋಗಕ್ಷೇಮವನ್ನು ವಿದುರನಿಗೊಪ್ಪಿಸಿ ತಾನು ಹೊರಟು ಅರಣ್ಯವನ್ನು ಸೇರಿದನು.

ಪಾಂಡವರು ಅರಣ್ಯಕ್ಕೆ ತೆರಳಿದ್ದನ್ನು ನೋಡಿ ಊರಿನವರೆಲ್ಲರೂ ಎದೆಗರಗಿ ಕಣ್ಣೀರಿನ ಕಾಲುವೆಯನ್ನು ಹರಿಸಿದರು. ಧರ್ಮರಾಯನು ಅರಣ್ಯಕ್ಕೆ ಹೊಕ್ಕಾಗ ಅವನ ಶಾಂತಸ್ವಭಾವವನ್ನು ನೋಡಿ ಜಿಂಕೆಗಳು ಮುಂದೆ ಬಂದು ಮರ್ಮರಶಬ್ದದಿಂದ ಮನೋಹರವಾಗಿರುವ ಅವನ ನಾರುಡಿಗೆಯನ್ನು ನೆಕ್ಕಿದವು. ಕಾಡಿನಲ್ಲಿ ಎಷ್ಟೋ ದೂರ ಹೋದ ಮೇಲೆ ಗಂಗಾನದಿ ಕಾಣಬಂತು. ಗಂಗಾನದಿಯು ಜಹ್ನುಋಷಿಯ ಕಿವಿಯಿಂದ ಹೊರಟು ಬಂದದ್ದೆಂದು ಜನರಾಡುವ ಮಾತು ಒಪ್ಪುವಂತೆ ನದಿಯ ತುಂಬ ಆಳವಾದ ಸುಳಿಗಳಿದ್ದವು. ಅವರು ಆ ಗಂಗಾನದಿಯನ್ನು ದಾಟಿ ಆ ರಾತ್ರಿಯನ್ನು ಕಳೆದರು. ಹೀಗೆ ಧರ್ಮರಾಯನು ಕಾಡಿನಲ್ಲಿದ್ದರೂ ಅನೇಕ ಜನ ಯಾಜ್ಞಿಕರು ಅವನ ನೆರವನ್ನು ಬಯಸಿ ಬಂದರು. ಹೀಗೆ ತನ್ನಲ್ಲಿಗೆ ಬಂದ ಅವರ ಹೊಟ್ಟೆಯ ಯೋಗಕ್ಷೇಮವನ್ನು ನೋಡುವದಕ್ಕಾಗಿ ಧರ್ಮರಾಯನು ಸೂರ್ಯನನ್ನು ಕುರಿತು ತಪಸ್ಸು ಮಾಡಿ ಒಂದಕ್ಷಯಪಾತ್ರೆಯನ್ನು ಪಡೆದನು.

ಪಾಂಡವರು ಕಾಮ್ಯಕವೆಂಬ ವನದಲ್ಲಿರುವಾಗ ಬಹು ಭಯಂಕರನಾದ ಕಿರ್ಮೀರನೆಂಬ ರಾಕ್ಷಸನು ತನ್ನ ತೋಳ ತೀಟೆಯನ್ನು ಕಳೆದುಕೊ

ಳ್ಳಬೇಕೆಂದು ಬಂದು ಭೀಮನನ್ನು ಕೆಣಕಿ ತನ್ನ ಹಾನಿಯನ್ನೇ ಮಾಡಿ ಕೊಂಡನು. ದ್ವೈತವನವೆಂಬ ಕಡೆ ಇದ್ದಾಗ ಅವರಿಗೆ ವ್ಯಾಸರ ದರ್ಶನ ವಾಯಿತು. ಆಗ ಅವರು ಪಾಂಡವರಿಗೆ ಉಂಟಾಗಿದ್ದ ಮನಸ್ಸಿನ ಖೇದ ವನ್ನೆಲ್ಲ ಕಳೆದರು.



## ಪಾಶುಪತಾಸ್ತ್ರದ ಸಂಪಾದನೆ

ವ್ಯಾಸರು ಅರ್ಜುನನಿಗೆ ವಿಶೇಷಪ್ರೀತಿಯಿಂದ 'ಪ್ರತಿಶ್ರುತಿ' ಎಂಬ ಮಂತ್ರೋಪಾಸನೆಯನ್ನು ಉಪದೇಶಮಾಡಿ ಅದರಿಂದ ಪರಮೇಶ್ವರನ ಅನು ಗ್ರಹವನ್ನು ಹೊಂದುವಂತೆ ಬೆನ್ನುಚಪ್ಪರಿಸಿದರು. ಅದನ್ನು ಸಾಧಿಸು ವದಕ್ಕಾಗಿ ಅರ್ಜುನನು ಧರ್ಮರಾಯನ ಅಪ್ಪಣೆಯನ್ನು ಹೊಂದಿ ಈಶ್ವರ ನಿಂದ ದಿವ್ಯಾಸ್ತ್ರವನ್ನು ಪಡೆಯುವದಕ್ಕಾಗಿ ಹಿಮವತ್ಪರ್ವತಕ್ಕೆ ಹೋದನು.

ಅಲ್ಲಿ ಶಿವಾಶ್ರಮವು ಕಾಣುತ್ತಲೆ ಅವನ ವಾಹನವಾದ ವೃಷಭಕ್ಕೆ ಕಾಣಿಕೆಯ ರೂಪವಾಗಿ ಒಂದು ಹಿಡಿ ದರ್ಭೆಯನ್ನು ತಂದು ಶಿವನ ಪಾದದ ಮೇಲಿಟ್ಟು ಆ ಪಾದವನ್ನೇ ತನ್ನ ಮನಸ್ಸಿನಲ್ಲಿ ಎಡೆಬಿಡದೆ ನೆನೆಯುತ್ತ ತಪಸ್ಸಿಗಾರಂಭಿಸಿದನು. ಬೇಕುಬೇಕಾದ ಆಸನಗಳನ್ನು ಹಾಕಬಲ್ಲವನಾದರೂ ಅರ್ಜುನನು ತಾನು ಸೋತಿರುವ ನೆಲದ ಮೇಲೆ ಕಾಲೂರುವದಿಲ್ಲವೆಂದು ಹಟವನ್ನು ತೊಟ್ಟವನಂತೆ ಬರಿಯ ದೊಂದು ಹೆಬ್ಬೆಟ್ಟನ್ನು ಮಾತ್ರ ನೆಲಕ್ಕೆ ತಾಕಿಸಿ ನಿಂತುಕೊಂಡು ಬಿಟ್ಟ ಕಣ್ಣಿನಿಂದ ಸೂರ್ಯನನ್ನು ನಿಟ್ಟಿಸುತ್ತ ತಪಶ್ಚರ್ಯೆಯನ್ನು ಮೊದಲು ಮಾಡಿದನು. ಅವನು ಸೂರ್ಯನ ಮೇಲೆ ಅಷ್ಟು ಕಣ್ಣು ಹಾಕಿರುವ ದನ್ನು ನೋಡಿದರೆ ಅವನು ತನ್ನ ಹಗೆಯಾದ ಕರ್ಣನ ತಂದೆಯೆಂಬ ಕೋಪದಿಂದ ಕೂಡಿದ ನೋಟವೆಂಬಂತಿತ್ತು. ಹಣ್ಣುಗಳು, ಎಲೆ ಗಳು, ನೀರು, ಗಾಳಿ– ಇವೇ ಅವನ ಆಹಾರ. ಇವುಗಳನ್ನು ಕೂಡ ಅವನು ಮೆಲ್ಲಮೆಲ್ಲಗೆ ಕಡಿಮೆಮಾಡುತ್ತಿದ್ದನು.

ಹೀಗೆ ನಿಂತ ಅರ್ಜುನನು ಈಶ್ವರನಿಂದ ಬರುವ ಫಲಗಳನ್ನು ತೆಗೆದುಕೊಳ್ಳುವದಕ್ಕಾಗಿ ಕೈ ಎತ್ತಿರುವನೆಂಬಂತೆ ಎರಡು ಕೈಗಳನ್ನೂ ಮೇಲಕ್ಕೆತ್ತಿದ್ದನು. ಈ ಉಗ್ರತಪಸ್ಸಿನಿಂದ ಅವನ ಶರೀರದಲ್ಲೆಲ್ಲ ಉಷ್ಣತೆಯು ಹೆಚ್ಚಿ ಹೊರಗೆಲ್ಲ ವ್ಯಾಪಿಸಿತು. ಮೇಲಿನ ಲೋಕದವ ರೆಲ್ಲ ಇದೆಲ್ಲಿಯ ತಾಪವೆಂದು ಕಳವಳಗೊಳ್ಳುತ್ತಿರುವಾಗ ನಾರದರು ಈಶ್ವರನ ಬಳಿಗೆ ಬಂದು ಅರ್ಜುನನ ವಿಚಾರವನ್ನು ಹೇಳಿದರು. ಅರ್ಜು ನನ ಪ್ರಾಬಲ್ಯವನ್ನು ಕೇಳಿದ ಪಾರ್ವತಿಯೂ ಅವನನ್ನು ನೋಡಬೇ ಕೆಂದು ಬಯಸಿದಳು. ಈಶ್ವರನು ಅದಕ್ಕೆ ಸಮ್ಮತಿಸಿ ಅರ್ಜುನನ ಹೆಚ್ಚುಗಾರಿಕೆಯನ್ನು ಪಾರ್ವತಿಗೆ ಮನಗಾಣಿಸುವದಕ್ಕಾಗಿ ಅರ್ಜುನನ ಬಳಿಗೆ ಪ್ರಯಾಣವನ್ನು ಬೆಳಸಿ ತಾನು ಬೇಡರೊಡೆಯನಾದನು. ಒಡನೆ ಪಾರ್ವತಿಯು ಬೇಡರೊಡತಿಯಾದಳು. ಅನರಿಬ್ಬರೂ ತಮ್ಮ ಮಗ ನಾದ ಗಜಾನನನ ಮುಖದ ಮದೋದಕವನ್ನೇ ತಿಲಕವಾಗಿಟ್ಟುಕೊಂಡು ಷಣ್ಮುಖನ ವಾಹನವಾದ ನವಿಲಿನ ಗರಿಗಳನ್ನು ತಲೆಗೆ ಅಲಂಕರಿಸಿ ಕೊಂಡರು. ಗಂಗಾನದಿಯ ತೀರದಲ್ಲಿದ್ದ ಮರಗಳ ತೊಗಟೆಗಳೇ ಅವ ರಿಗೆ ವಸ್ತ್ರಗಳಾದವು.

ಈಶ್ವರಪಾರ್ವತಿಯರು ಬೇಟೆಗಾರರ ವೇಷವನ್ನು ತಾಳಿ ಹೊರ ಡುತ್ತಲೆ ಪ್ರಮಥಗಣಗಳೆಲ್ಲ ಆ ಸಮಯಕ್ಕೆ ತಮತಮಗೆ ತಕ್ಕ ವೇಷ ವನ್ನು ತಾಳುವವರಾದರು. ನಾಲ್ಕು ವೇದಗಳು ನಾಯಿಗಳಾಗಿ ಬಾಲಗಳನ್ನು ಅಲ್ಲಾಡಿಸುತ್ತ ಹಿಂದೆ ಹೊರಟವು. ಬಹಳ ದೂರದ ವರೆಗೆ ನಡೆದ ಶ್ರಮೆಯಿಂದ ಅವುಗಳು ಬಿಟ್ಟ ಬಾಯಲ್ಲಿ ಜೋತಾಡು ತ್ತಿರುವ ನಾಲಿಗೆಯ ತುದಿಯಿಂದ ಜೊಲ್ಲು ತೊಟ್ಟಿಕ್ಕುತ್ತಿತ್ತು. ನೈ ಎಲ್ಲ ಕುಲುಕುವಂತೆ ಅವು ಸಿಟ್ಟಿಸಿರಿಡುತ್ತ ಪೊದೆಗಳಲ್ಲಿ ಮೃಗ ಗಳನ್ನು ಹುಡುಕಿ ಹುಡುಕಿ ಹುಂಕಾರವನ್ನು ಮಾಡುತ್ತಿದ್ದವು. ಆ ಬೇಡರ ಗಂಡಹೆಂಡಿರು ಜಿಂಕೆಯನ್ನು ಅಟ್ಟಿಕೊಂಡು ಬಂದರು. ದಾರಿಯುದ್ದಕ್ಕೂ ಹಾಸಿಗೆಯಾಗಿ ಉದುರಿದ್ದ ಹೂಗಳ ಮೇಲೆ ಅವರು ಬೆಡಗಿನಿಂದ ಜಗ್ಗುಹಾಕುತ್ತ ಬರುವವರಾದರು. ಅವರನ್ನು ಕಂಡಾಗ

ಆ ಕಾಡಿನ ಬೇಡರ ಹೆಂಗಸರು ಯಾರೋ ಹೊರಗಣವರು ಬಂದು ದಿಟ್ಟತನದಿಂದ ತಮ್ಮ ಪ್ರದೇಶವನ್ನು ಮುತ್ತುತ್ತಿರುವರೆಂದು ಸಿಟ್ಟನ್ನು ಹೊಂದಿದವರಾದರೂ ಅವರ ಮುಂದೆ ಉಸಿರೆತ್ತಲಾರದವರಾಗಿ ಸುಮ್ಮನೆ ನೋಡುತ್ತಿದ್ದರು. ಬೇರು ಬಿಟ್ಟುಕೊಂಡಿರುವ ಜಡೆಗಳುಳ್ಳವರಾಗಿ ಕೈಜೋಡಿಸಿಕೊಂಡಿರುವ ಮುನಿಗಳೂ ಆಕಾಶದಲ್ಲಿ ವಿಮಾನವನ್ನು ನಿಲ್ಲಿಸಿಕೊಂಡು ಆನಂದಾಶ್ರುಗಳಿಂದ ಕೂಡಿ ನೋಡುತ್ತಿರುವ ದೇವತೆಗಳೂ ಜಯಜಯಕಾರವನ್ನು ಮಾಡುವವರಾದರು. ಹೀಗೆ ಜಗತ್ತಿಗೆ ಮೊದಲನೆಯವರಾದ ಆ ಬೇಡರ ಗಂಡಹೆಂಡಿರು ಅರ್ಜುನನ ಬಳಿಗೆ ಮೆಲ್ಲಗೆ ಬಂದು ಸೇರಿದರು.

ಅಲ್ಲಿ ಅರ್ಜುನನ ಜಟೆಯು ಕಾಲವರೆಗೆ ಜೋಲುಬಿದ್ದಿತ್ತು. ತಪಸ್ಸಿನಿಂದ ಆದ ಆಯಾಸದಿಂದ ಅವನ ಮೈ ಸೊರಗಿತ್ತು. ಅವನನ್ನು ನೋಡುತ್ತಲೆ ಪಾರ್ವತಿಯು ಅವನನ್ನು ತನ್ನ ಮೂರನೆಯ ಮಗನೆಂದು ಪ್ರೀತಿಯನ್ನು ಹೊಂದಿದಳು. ಅಷ್ಟರಲ್ಲಿ ಒಂದು ಕಾಡುಹಂದಿಯು ತನ್ನ ಗೊರಸುಗಳಿಂದ ಭೂಮಿಯನ್ನು ಅಗಿಯುತ್ತ ಕೇಳಿದವರ ಎದೆಯನ್ನು ನಡುಗಿಸುವ ಫೂತ್ಕಾರದಿಂದ ತನ್ನ ಮೂಗನ್ನು ಅಲ್ಲಾಡಿಸುತ್ತ ಸಿಟ್ಟಿನ ಭರದಿಂದ ಅರ್ಜುನನ ಆಶ್ರಮದ ನಡುವೆ ನುಗ್ಗಿ ಬಂತು. ಆ ಹಂದಿಯನ್ನು ಕಂಡಾಗ ಆ ಅಡವಿಯ ಜಿಂಕೆಯ ಮರಿಗಳು ಹೆದರಿ ಅವನ ಸೊಂಟದಲ್ಲಿ ಕಟ್ಟಿದ್ದ ನಾರುಬಟ್ಟೆಯ ಮಡಿಕೆಗಳಲ್ಲಿ ಅಡಗಿಕೊಂಡವು. ಇದರಿಂದ ಅರ್ಜುನನು ಎಚ್ಚತ್ತು ತನ್ನ ತಪಸ್ಸಿಗೆ ಸ್ವಲ್ಪ ವಿರಾಮವನ್ನು ಕೊಟ್ಟು ಧನುಸ್ಸನ್ನು ಕೈಗೆ ತೆಗೆದುಕೊಂಡನು. ಆ ಹಂದಿಯನ್ನು ಕೊಲ್ಲಬೇಕೆಂದು ಮನಸ್ಸು ಮಾಡಿ ಅರ್ಜುನನು ಆ ಬಿಲ್ಲಿನ ಹೆದೆಯನ್ನು ನುಡಿಸಿ ಆ ಹಂದಿಯನ್ನು ಅಟ್ಟಿಕೊಂಡು ಬರುವಾಗ ತನ್ನಂತೆ ಬಿಲ್ಲುಹಿಡಿದ ಬೇಡನು ಪರಿವಾರದೊಡನೆ ಅದನ್ನೇ ಅಟ್ಟಿಕೊಂಡು ಬರುತ್ತಿರುವದನ್ನು ಕಂಡನು. ಆಗ ಆ ಕಾಡುಬೇಡನು "ಎಲೋ ನೀಚ ! ನಾನು ಅಟ್ಟಿಕೊಂಡು ಬರುತ್ತಿರುವ ಆ ಹಂದಿಯ ಮೇಲೆ ನೀನು ಬಾಣವನ್ನು ಬಿಡಬೇಡ"– ಎಂದು ಹೇಳಿದನು. ಅರ್ಜುನನು

ಅವನ ಮಾತುಗಳನ್ನು ಕಿವಿಗೆ ಹಾಕಿಕೊಳ್ಳದೆ ಆ ಹಂದಿಗೆ ಗುರಿಯಿಟ್ಟು ತನ್ನ ಬಾಣವನ್ನೆಸೆದನು. ಅದೇ ಸಮಯಲ್ಲಿಯೇ ಬೇಡನಾದ ಈಶ್ವರನೂ ಅದರ ಮೇಲೆ ಬಾಣವನ್ನು ಬಿಟ್ಟನು. ಒಡನೆಯೆ ಅದರ ಆಯುಷ್ಯವು ಕೊನೆಗಂಡಿತು.

ಆಗ ಅರ್ಜುನನಿಗೆ ಸಿಟ್ಟು ಬಂತು. ಅವನು ತಪಸ್ವಿಯಾಗಿದ್ದದ್ದರಿಂದ ಅದನ್ನು ಸ್ವಲ್ಪ ನುಂಗಿಕೊಂಡು ಆ ಬೇಡನನ್ನು ಕುರಿತು "ಎಲೈ ಬೇಡನೆ, ಈ ಹಂದಿಯು ನನ್ನ ಆಶ್ರಮಕ್ಕೆ ಬಂದದ್ದು ಮತ್ತು ಮೊದಲು ನಾನು ಗುರಿಯಿಟ್ಟದ್ದು. ಆದ್ದರಿಂದ ಇದರ ಮೇಲೆ ನೀನು ಬಾಣವನ್ನು ಬಿಟ್ಟ ಅಪರಾಧಕ್ಕೆ ನಾನು ನಿನ್ನನ್ನು ಶಿಕ್ಷಿಸಬೇಕಾದರೂ ಈಗ ನಾನು ತಪಸ್ವಿಯಾಗಿರುವದರಿಂದ ತಡೆದುಕೊಂಡಿದ್ದೇನೆ. ಎಚ್ಚರವಿರಲಿ !"– ಎಂದು ಹೇಳಿದನು. ಬೇಡನ ವೇಷದ ಈಶ್ವರನು ಅವನ ಮಾತನ್ನು ಕೇಳಿ ನಗುತ್ತ ಹೇಳಿದ್ದೇನೆಂದರೆ :— "ಎಲೈ ಮುನಿಯೆ, ನಿನ್ನ ಮಾತನ್ನು ನೋಡಿದರೆ ಸ್ವಲ್ಪ ಶಾಂತಬುದ್ಧಿಯುಳ್ಳವನಾಗಿಯೇ ಕಾಣಿಸುವೆ. ಆದರೆ ಇಂಥ ಕಾಡಿನಲ್ಲಿ ಮೃಗಗಳ ಮೇಲೆ ಕೈ ಮಾಡುವದನ್ನು ತಿಳಿದವರು ಬೇಡರ ಧರ್ಮವೆನ್ನುತ್ತಾರೊ ಮುನಿಯ ಧರ್ಮವೆನ್ನುತ್ತಾರೊ ನೀನೇ ಹೇಳು. ಈಗ ನೋಡು; ನಾನು ನನ್ನ ಕುಲಾಚಾರವನ್ನು ಬಿಟ್ಟವನಾಗಿಲ್ಲ; ನೀನು ಅದನ್ನು ಬಿಟ್ಟು ನಿಂತಿದ್ದಿ. ತಪಸ್ಸಿನಲ್ಲಿ ಅಭಿಮಾನವನ್ನು ತೋರಿಸುವ ನೀನು ತೋಳಿನ ಮೇಲಿನ ಅಭಿಮಾನವನ್ನು ಎಷ್ಟರ ಮಟ್ಟಿಗೆ ತೋರಿಸುವೆಯೋ ನಾನು ನೋಡೇನು. ಎಲೈ ಮುನಿಯೆ, ಪ್ರಾಣಿಗಳ ಮೇಲೆ ಕೈಮಾಡುವದು ನಿನಗೊಪ್ಪುವ ಮಾತೇ ? ಇಂಥ ಮಾತನ್ನು ಬಿಡು. ಹತ್ತಿರಕ್ಕೆ ಬಾ. ತಪ್ಪಾಯಿತೆಂದು ಕೇಳಿಕೊ. ನೀನು ನನಗೆ ಎಷ್ಟರವನು ! ನಾನು ಸಿಟ್ಟಿನಿಂದ ಸ್ವಲ್ಪ ಕಣ್ಣು ಕೆಂಪಗೆ ಮಾಡಿದರೆ ಸಾಕು; ಯಮನು ಕೂಡ ಗಡಗಡನಡುಗುವನು."

ಹೀಗೆ ಬೇಡನಾಡಿದ ಸೊಕ್ಕಿನ ಮಾತುಗಳನ್ನು ಕೇಳಿ ಅರ್ಜುನನು ಅವನನ್ನು ಕುರಿತು, 'ಎಲೋ ನೀಚ, ನಿನ್ನ ಹೆಂಗಸರ ಮುಂದೆ ಬಡಾಯಿ ಕೊಚ್ಚಿಕೊಳ್ಳುತ್ತೀಯ ? ನಿನ್ನ ಹೆಂಡತಿಯ ಕಿವಿಯೊಳಗೆ ವಾಲೆಯಿರು

ವದು ನಿನಗೆ ಒಪ್ಪಿಗೆಯಿಲ್ಲವೆಂದು ತೋರುತ್ತದೆ”- ಎಂದು ಜರಿಯಲು ಕಿವಿಗೆ ಸೀಸವನ್ನು ಕಾಸಿ ಹೊಯ್ದ ಆ ಮಾತನ್ನು ಕೇಳಿ ಪ್ರಮಥಗಣಗಳೆಲ್ಲ ಸೇರಿ ಅರ್ಜುನನ ಹೆಸರಳಿಸಬೇಕೆಂದು ಮನಸ್ಸುಮಾಡಿದರು. ಇದನ್ನು ನೋಡಿ ಪಾರ್ವತಿಯು ತನ್ನೊಳಗೆ ಹುಟ್ಟಿದ ನಗುವನ್ನು ತನ್ನಲ್ಲಿಯೇ ಅಡಗಿಸಿಕೊಂಡಳು. ಅಷ್ಟರಲ್ಲಿ ಬೇಡನಿಗೂ ಅರ್ಜುನನಿಗೂ ಭಯಂಕರವಾದ ಯುದ್ಧವಾರಂಭವಾಯಿತು. ಅರ್ಜುನನಿಗೆ ಮಂಗಲವಾಗಲೆಂದು ಪಾರ್ವತಿಯು ಮನಸ್ಸಿನಲ್ಲಿಯೇ ಹರಸಿದಳು.

ದಯಾಳುವಾದ ಶಿವನು ಧನುಸ್ಸಿನ ಹೆದೆಯನ್ನು ಕಿವಿಯವರೆಗೆ ಳೆದರೂ ಬಾಣಗಳನ್ನು ಬಿಡುವಾಗ ಭಕ್ತನ ಮೇಲಿನ ಕನಿಕರದಿಂದ ಅವನಿಗೆ ಅವು ಹಗುರವಾಗಿ ತಾಕುವಂತೆ ಮಾಡಿದನು. ಅರ್ಜುನನಾದರೊ ಬೇಡನ ಮೈಯನ್ನು ತೂರಿ ಹಾರುವಂತೆ ಕೈಮಾಡುತ್ತಿದ್ದನು. ಆದರೆ ಆ ಬಾಣಗಳು ಬೇಡನ ಮೈಯನ್ನು ತೂರುತ್ತಿದ್ದವೇ ಹೊರತು ಅಲ್ಲಿಂದ ಹೊರಗೆ ಬರುತ್ತಲೇ ಇರಲಿಲ್ಲ. ಅರ್ಜುನನ ಬತ್ತಳಿಕೆಯೆಲ್ಲ ಬರಿದಾಯಿತು. ಆಗ ಅರ್ಜುನನಿಗೆ ಬೇರೆಯೇನೂ ತೋರದೆ ಅವನು ಪಾರ್ವತಿಯ ಕಣ್ಣೆದುರಿಗೇ ತನ್ನ ಗಾಂಡೀವಧನುಸ್ಸಿನಿಂದ ಆ ಬೇಡನ ತಲೆಯ ಮೇಲೆ ಅಪ್ಪಳಿಸಿ ಅರ್ಧಚಂದ್ರನ ಆಕಾರವಾದ ಗಾಯವನ್ನು ಮಾಡಿದನು. ಆ ಹೊಡೆತದಿಂದ ಈಶ್ವರನ ತಲೆಯಲ್ಲಿದ್ದ ಹಾವುಗಳ ಹೆಡೆಗಳ ಮೇಲಿದ್ದ ಕೆಂಪು ಮಣಿಗಳೆಲ್ಲ ಸಿಡಿದು ರಕ್ತದ ಹನಿಗಳಂತೆ ಬಿದ್ದವು. ಈ ಗಾಂಡೀವವೇ ಖಾಂಡವವನದಲ್ಲಿ ತಕ್ಷಕನ ಹೆಂಡತಿಯ ಸಾವಿಗೆ ಕಾರಣವಾಯಿತೆಂದು ನೆನೆಸಿ ರೇಗಿದವುಗಳಾಗಿ ಈಶ್ವರನ ಜಟೆಯೆಂಬ ಪೊದೆಯಲ್ಲಿ ಅಡಗಿದ್ದ ಹಾವುಗಳು ಆ ಧನುಸ್ಸನ್ನೇ ನುಂಗಿಬಿಟ್ಟವು.

ಅರ್ಜುನನಿಗೆ ಈಗ ದಿಕ್ಕುತೋಚದೆ ಹೋಯಿತು. ಆದರೂ ಅವನು ಕ್ಷಾತ್ರಸ್ವಭಾವವನ್ನು ಬಿಡದೆ “ಎಲೋ ದುರಾತ್ಮನೆ, ನಿಲ್ಲು ನಿಲ್ಲು, ನೀನು ಅರ್ಜುನನನ್ನು ಗೆಲ್ಲಬಲ್ಲೆಯಾ ?” ಎಂದು ಈಶ್ವರನೊಡನೆ ಬಾಹುಯುದ್ಧಕ್ಕೆ ತೊಡಗಿದನು. ಅರ್ಜುನನ ಬಲವಾದ ಮುಷ್ಟಿಯ

ಹೊಡೆತವು ಆ ಬೇಡನ ಎದೆಯ ಎಡಭಾಗದ ಮೇಲೆ ಬೀಳುತ್ತಲೆ ಅವನ ವಾಮಾಂಗಿಯ ಮಣಿಗಳ ಹಾರಗಳು ಸಡಿಲವಾಗಿ ಜಾರಿ ಹೋದವು. ಈಶ್ವರನು ಅರ್ಜುನನ ಹೃದಯದಲ್ಲಿರುವವನೂ ತಾನೇ ಆದ್ದರಿಂದ ತನಗೆ ಹೆಚ್ಚಾದ ಪೆಟ್ಟಾಗದಿರುವಂತೆ ಉಪವಾಸದಿಂದ ಸೊರಗಿದ ಆ ಅರ್ಜುನನ ಎದೆಗೆ ತಿರುಗಿ ಹೊಡೆದನು. ಹೀಗೆ ಸ್ವಲ್ಪ ಹೊತ್ತು ನಡೆದ ಮೇಲೆ ಈಶ್ವರನು ಅರ್ಜುನನನ್ನು ಕೆಳಮುಖವಾಗಿ ಬೀಳಿಸಿದನು. ಅದರಿಂದ ಅರ್ಜುನನಿಗೆ ಮೂರ್ಛೆಯುಂಟಾಯಿತು. ಅರ್ಜುನನ ತೋಳ ಬಲವನ್ನು ನೋಡಿ ಈಶ್ವರನು ಬೆರಗಾಗಿ ತಲೆದೂಗುತ್ತಿದ್ದನು. ಸ್ವಲ್ಪ ಹೊತ್ತಿನ ಮೇಲೆ ಅರ್ಜುನನು ಚೇತರಿಸಿಕೊಂಡೆದ್ದಾಗ ಎದುರಿಗೆ ಈಶ್ವರನು ವೃಷಭದ ಮೇಲೆ ಹತ್ತಿಕೊಂಡು ಕಾಣುತ್ತಿದ್ದಾನೆ; ವೃಷಭದ ಘಂಟೆಗಳು ಘಣಘಣತ್ಕಾರದಿಂದ ಕಿವಿಗೆ ಅಮೃತದ ಸೋನೆಯನ್ನು ಸುರಿಸುತ್ತಿವೆ. ಪಾರ್ವತಿಯ ಕೈ ಶಿವನ ಕಂಕುಳ ಕೆಳಗೆ ಹಾದು ಎದೆಯ ಮೇಲೆ ಶೋಭಿಸುತ್ತಿದೆ. ಪ್ರಮಥರೆಲ್ಲ ಕೈ ಮುಗಿದುಕೊಂಡಿದ್ದಾರೆ. ಈಶ್ವರನು ಮೃದುವಾದ ಹುಲಿಯ ಚರ್ಮದಿಂದ ಮಾಡಿದ ಸಬರದ ಮೇಲೆ ಒಂದೇ ಕಡೆ ಕಾಲುಗಳನ್ನು ಬಿಟ್ಟುಕೊಂಡಿದ್ದಾನೆ. ಆ ಕಾಲುಗಳನ್ನು ನಂದಿಕೇಶ್ವರನು ಒತ್ತುತ್ತಿದ್ದಾನೆ. ವೃಷಭವು ಕೊಬ್ಬಿನಿಂದ ಸಿಕ್ಕಿದ ಕಡೆ ಹಾರದಂತೆ ಭೃಂಗಿಯು ಬಂಗಾರದ ಕಡಿವಾಣವನ್ನು ಬಿಗಿಹಿಡಿದು ಹೆಗಲನ್ನು ತಟ್ಟುತ್ತಿದ್ದಾನೆ. ತುಂಬುರು ಮೊದಲಾದ ಗಂಧರ್ವರು ಸಿಂತು ಅವನು ಭಕ್ತರನ್ನು ರಕ್ಷಿಸಿದ ಚರಿತ್ರೆಗಳನ್ನು ಹಾಡುತ್ತಿದ್ದಾರೆ. ಅವನ ಮುಖವು ಪ್ರಸನ್ನವಾಗಿದೆ.

ಇದನ್ನು ನೋಡಿ ಅರ್ಜುನನಿಗೆ ಮೈಮೇಲಿನ ಕೂದಲು ಹುರಿಯೇರಿತು. ಆಗಅವನು ವಿನಯದಿಂದ ಹತ್ತಿರಕ್ಕೆ ಬಂದು ಈಶ್ವರನ ಕಾಲ ಮೇಲೆ ಬಿದ್ದು ತನ್ನ ಎಲ್ಲಾ ತಪ್ಪನ್ನೂ ಮನ್ನಿಸಬೇಕೆಂದು ಬೇಡಿಕೊಂಡನು. ಒಡನೆ ಈಶ್ವರನು ತನ್ನ ಮೃದುವಾದ ಚಿಗುರಿನಂಥ ಕೈಯಿಂದ ಅವನನ್ನು ತಡವಿ ಅವನ ಗಾಯಗಳ ನೋವನ್ನೆಲ್ಲ ಹೋಗಲಾಡಿಸಿ ಅವನನ್ನು ಕುರಿತು 'ಹೇ ವೀರ, ನಿನ್ನ ಈ ತಪ್ಪಿನಿಂದ ಆದಷ್ಟು ಸಂತೋಷವು ನನಗೆ ಯಾವ

ಭಕ್ತಿಯಿಂದಲೂ ತಪಸ್ಸಿನಿಂದಲೂ ಪೂಜೆಯಿಂದಲೂ ಆಗಲಿಲ್ಲ' ಎಂದು ಅವನ ಗಾಂಡೀವವನ್ನು ಅವನಿಗೆ ತಿರುಗಿ ಕೊಟ್ಟದ್ದಲ್ಲದೆ ಅವನು ಕೊಟ್ಟ ಪೆಟ್ಟಿಗೆ ಬಹುಮಾನವೆಂದು ಹೇಳಿ ತನ್ನ ಪಾಶುಪತಾಸ್ತ್ರವನ್ನು ಕೊಟ್ಟನು. ಆ ಲಾಭದಿಂದ ಹರ್ಷವನ್ನು ಹೊಂದಿ ಅರ್ಜುನನು ರೆಪ್ಪೆಯನ್ನು ಹೊಡೆಯದೆ ಈಶ್ವರನನ್ನು ಕಣ್ತುಂಬ ನೋಡುತ್ತಿರುವಾಗಲೆ ಆ ಈಶ್ವರನು ತನ್ನ ಪರಿವಾರದೊಡನೆ ಮಾಯವಾದನು.

## ಅರ್ಜುನನು ಇಂದ್ರಲೋಕದಲ್ಲಿ ವಾಸಮಾಡಿದ್ದು

ಆಮೇಲೆ ಸಮೀಪದಲ್ಲಿದ್ದ ಋಷಿಗಳೆಲ್ಲ ಅರ್ಜುನನನ್ನು ಹರಸಿದರು. ತನ್ನ ಮಗನ ಏಳಿಗೆಯನ್ನು ಕೇಳಿ ಇಂದ್ರನು ಅವನನ್ನು ತನ್ನ ಪಟ್ಟಣಕ್ಕೆ ಬರಹೇಳಿ ಕಳುಹಿಸಿದನು. ಅರ್ಜುನನು ಅದಕ್ಕೊಪ್ಪಿ ದೇವಲೋಕದ ರಥವನ್ನು ಹತ್ತಿದನು. ಇಂದ್ರನ ಸಾರಥಿಯಾದ ಮಾತಲಿಯೇ ವಾಯುವೇಗವನ್ನು ಮೀರುವ ಕುದುರೆಗಳನ್ನು ಕಟ್ಟಿದ್ದ ಆ ರಥವನ್ನು ನಡೆಸಿದನು. ಅರ್ಜುನನನ್ನು ಕಂಡೊಡನೆ ಇಂದ್ರನು ತನ್ನ ಹೊಟ್ಟೆಯಲ್ಲಿ ಹುಟ್ಟಿದ ಜಯಂತನಿಗಿಂತಲೂ ಹೆಚ್ಚಿನ ಪ್ರೇಮವನ್ನು ತೋರಿಸಿ ಅವನನ್ನು ತಬ್ಬಿಕೊಂಡು ತನ್ನ ಪೀಠದ ಮೇಲೆಯೇ ಕೂಡಿಸಿಕೊಂಡನು. ಅರ್ಜುನನ ಸೌಂದರ್ಯವು ಅಪ್ಸರಸ್ತ್ರೀಯರ ಕುಡಿನೋಟವನ್ನು ತನ್ನ ಕಡೆಗೆ ಸೆಳೆಯಿತು. ದೇವತೆಗಳ ಸಭೆಯಲ್ಲಿ ಇಂದ್ರನು ಈಶ್ವರನೊಡನೆ ನಡೆದ ಹೋರಾಟದ ವಿಷಯವನ್ನೆಲ್ಲ ತನ್ನ ಮಗನಿಂದಲೆ ಹೇಳಿಸಿದನು. ಆಮೇಲೆ ಜಯಂತನು ಬಂದು ತಂದೆಯ ಅಪ್ಪಣೆಯಂತೆ ಅರ್ಜುನನನ್ನು ಐರಾವತದ ಮೇಲೆ ಕೂಡಿಸಿ ಮಂಗಲವಾದ್ಯಗಳೊಡನೆ ವೈಜಯಂತವೆಂಬ ಅರಮನೆಗೆ ಕರೆದುಕೊಂಡು ಹೋದನು. ಅಲ್ಲಿ ಅವನು ಶಚೀದೇವಿಗೆ ಎರಗಿದಾಗ ಆಕೆಯು ಅವನನ್ನು ಹರಸಿ ಪಾರಿಜಾತದ ಹೂವಿನ ಧೂಳಿಯಿಂದ ಅವನ ಹಣೆಯ ಮೇಲೆ ತಿಲಕವನ್ನಿಟ್ಟಳು. ದೇಹಕಾಂತಿಯಲ್ಲಿ ಅರ್ಜುನನೂ ಜಯಂತನೂ ಒಂದೇ ಆಗಿದ್ದದ್ದರಿಂದ ಗಾಂಡೀವಧನುಸ್ಸನ್ನು ಹೊತ್ತು ಜಡ್ಡುಕಟ್ಟಿದ್ದ ಹೆಗಲಿನಿಂದ

ಅರ್ಜುನನನ್ನು ಗುರ್ತಿಸಬೇಕಾಗಿತ್ತು. ಅರ್ಜುನನು ದೇವಲೋಕದಲ್ಲಿ ವಾಸಮಾಡಿಕೊಂಡಿದ್ದಾಗ ಇಂದ್ರನಿಂದ ಅನೇಕ ಅಸ್ತ್ರವಿದ್ಯೆಗಳನ್ನು ಕಲಿತದ್ದಲ್ಲದೆ ಕೋಗಿಲೆಯನ್ನು ಮೀರಿಸುವ ತನ್ನ ಕಂಠಕ್ಕೊಪ್ಪುವಂತೆ ಚಿತ್ರಸೇನನೆಂಬ ಗಾಯಕನಿಂದ ಗಾನವಿದ್ಯೆಯನ್ನು ಕಲಿತನು. ಒಮ್ಮೆ ಊರ್ವಶಿಯು ಏಕಾಂತದಲ್ಲಿ ಅರ್ಜುನನ ಬಳಿಗೆ ಬಂದು ಅವನನ್ನು ತನ್ನ ಮೋಹದ ಬಲೆಯೊಳಗೆ ಬೀಳಿಸಿಕೊಳ್ಳಲಾರದೆ 'ನೀನು ನಪುಂಸಕನಾಗೆಂದು ಶಾಪವನ್ನು ಕೊಟ್ಟಳು. ಈ ಸುದ್ದಿಯನ್ನು ಕೇಳಿದ ಇಂದ್ರನು 'ಗಾನವಿದ್ಯೆಯೊಡನೆ ಕೂಡಿದ ನಿನಗೆ ಈ ಶಾಪವು ಮುಂದೆ ನಿನ್ನ ಅನುಕೂಲಕ್ಕೆ ಕಾರಣವಾಗಲಿ' ಎಂದು ಅವನನ್ನು ಸಂತಯಿಸಿದನು.

ಅಸ್ತ್ರವಿದ್ಯೆಯ ಉಪದೇಶವೆಲ್ಲ ಮುಗಿದ ಮೇಲೆ ಇಂದ್ರನು ಗುರುದಕ್ಷಿಣೆಯ ರೂಪವಾಗಿ ತನ್ನ ಶತ್ರುಗಳನ್ನು ನಾಶಮಾಡೆಂದು ಹೇಳಿ ಬೃಹಸ್ಪತ್ಯಾಚಾರ್ಯರೆದುರಿನಲ್ಲಿಯೇ ತನ್ನ ಕಿರೀಟವನ್ನು ತೆಗೆದು ಅರ್ಜುನನ ತಲೆಯ ಮೇಲಿಟ್ಟನು. ಆಗ ಮಾತಲಿಯು ರಥವನ್ನು ಸಜ್ಜುಗೊಳಿಸಿ ತಂದನು. ಒಡನೆ ಅರ್ಜುನನು ಹೊರಡಲು ನಂದನವನದ ಕಿರುಗಾಳಿಯಿಂದ ಅವನ ಧ್ವಜಪಟದ ಕುಣಿದಾಟವಾರಂಭವಾಯಿತು. ಆಕಾಶಮಾರ್ಗದಲ್ಲಿ ಬಹುದೂರ ನಡೆದಮೇಲೆ ಸಮುದ್ರದ ಅಲೆಗಳ ಶಬ್ದಕ್ಕಿಂತ ಹೆಚ್ಚಾದ ರಾಕ್ಷಸರ ಕೋಲಾಹಲಶಬ್ದದಿಂದ ಕೂಡಿದ ರಸಾತಲವು ಕಾಣಬಂತು. ಅಲ್ಲಿ ಅವನು ಅದನ್ನು ಮುತ್ತಿ ತನ್ನ ಯುದ್ಧವಿದ್ಯೆಯ ಗಂಟನ್ನು ಬಿಚ್ಚಿದನು.

ಅಲ್ಲಿ ನಿವಾತಕವಚರೆಂಬ ಮೂರು ಕೋಟಿ ರಾಕ್ಷಸರಿದ್ದರು. ಇವರು ಹಿಂದೆ ಎಂದೂ ಗಾಂಡೀವದ ಹೆಸರನ್ನೇ ಕೇಳಿರಲಿಲ್ಲ. ಆದ್ದರಿಂದ ಬಂದು ಮುಂದುನೋಡದೆ ತಮ್ಮ ದಂಡಿನೊಡನೆ ಅವನನ್ನು ಎದುರಿಸಿದರು. ದೇವತೆಗಳಿಂದ ತಮಗೆ ಅಳಿವಿಲ್ಲವೆಂದು ಅವರಿಗೆ ಧೈರ್ಯವಿತ್ತು. ಆದರೆ ಅರ್ಜುನನು ಅವರನ್ನೆಲ್ಲ ಮೂಲೆಗೆ ಮುಟ್ಟುಮಾಡಿದನು. ಅವರ ನಾಶವನ್ನು ಕೇಳಿ ಅವರ ಬಂಧುಗಳಾದ ಕಾಲಕೇಯರೆಂಬುವರು ಹಿರಣ್ಯಪುರದಿಂದ ಓಡಿಬಂದರು. ಅರ್ಜುನನು ಅವರನ್ನೂ

ನಿವಾತಕವಚರು ಹೋದ ಕಡೆಗೇ ಕಳುಹಿಸಿದನು. ಇದರಿಂದ ಅರ್ಜುನನ ಬೆಳಕು ಎಲ್ಲ ದಿಕ್ಕುಗಳಲ್ಲಿಯೂ ಚೆನ್ನಾಗಿ ಬೆಳಗಿತು. ಹಗೆಗಳನ್ನು ಗೆದ್ದು ಬಂದ ಅರ್ಜುನನನ್ನು ನೋಡಿ ಇಂದ್ರನು ದೇವತೆಗಳೊಡನೆ ಹಿರಿಹಿರಿ ಹಿಗ್ಗಿದನು. ಹೀಗೆ ಅವನು ಅಲ್ಲಿ ಐದು ವರ್ಷ ವಾಸ ಮಾಡಿದನು.

## ಭೀಮನು ಸೌಗಂಧಿಕಪುಷ್ಪವನ್ನು ತಂದದ್ದು

ಅರ್ಜುನನು ಇಂದ್ರಲೋಕದಲ್ಲಿರುವ ವಿಚಾರವು ಧರ್ಮರಾಯನಿಗೆ ಲೋಮಶರಿಂದ ತಿಳಿಯಿತು. ಇತ್ತ ಧರ್ಮರಾಯನು ಭೀಮ ಮೊದಲಾದವರೊಡನೆ ತೀರ್ಥಯಾತ್ರೆಯನ್ನು ಮಾಡುತ್ತ ಬದರೀಕ್ಷೇತ್ರಕ್ಕೆ ಬಂದನು. ಅಲ್ಲಿ ಅವನಿಗೆ ನರ ಮತ್ತು ನಾರಾಯಣ– ಎಂಬಿಬ್ಬರ ದರ್ಶನವಾಯಿತು. ಅವರನ್ನು ಕಾಣುತ್ತಲೆ ಧರ್ಮರಾಯನು ಅವರಿಗೆ ಉದ್ದಕ್ಕೆ ಅಡ್ಡಬಿದ್ದನು. ಅವರನ್ನು ಕಾಣುತ್ತಲೇ ಧರ್ಮರಾಯನ ಮನಸ್ಸಿನ ವ್ಯಥೆಯೆಲ್ಲ ಹೋಯಿತು. ಆದ್ದರಿಂದ ಅವನು ಅಲ್ಲಿಯೇ ನಿಂತು ತನಗೆ ರಾಜ್ಯನಷ್ಟದಿಂದುಂಟಾಗಿರುವ ದುಃಖವನ್ನು ಮರೆತನು.

ಹೀಗಿರುವಾಗ ಒಂದು ಸಮಯದಲ್ಲಿ ಒಂದು ಕೆಂಪು ಕಮಲದ ಹೂ ಗಾಳಿಯಿಂದ ಹಾರಿಬಂದು ಬಿತ್ತು. ಅದು ವನವಾಸದ ಬೇಸರವನ್ನೆಲ್ಲ ಹೋಗಲಾಡಿಸಿ ಬಹುಮನೋಹರವಾಗಿ ತೋರಿಕೊಂಡಿತು. ಭೀಮನು ಅದನ್ನು ಕೈಗೆ ತೆಗೆದುಕೊಂಡನು. ಆ ಹೊತ್ತಿಗೆ ಸರಿಯಾಗಿ ದ್ರೌಪದಿಯು ‘ ಇಂಥದ್ದು ಎಲ್ಲಿ ಸಿಕ್ಕಿತು. ? ’ ಎಂದು ಬಹು ಕುತೂಹಲದಿಂದ ತನಗಿರುವ ಅದರ ಬಯಕೆಯನ್ನು ತೋರಿಸಿದಳು. ಭೀಮಸೇನನು ಅದೆಲ್ಲಿರಬಹುದೆಂದು ಸ್ವಲ್ಪ ಹೊತ್ತು ಯೋಚಿಸಿ ಅದನ್ನು ತರುವದಕ್ಕಾಗಿ ಉತ್ತರದಿಕ್ಕಿನ ದಾರಿಯನ್ನು ಹಿಡಿದನು.

ಎಷ್ಟೋ ಗುಡ್ಡಗಳನ್ನೂ ನದಿಗಳನ್ನೂ ಬೇಗಬೇಗ ದಾಟಿದ್ದಾಯಿತು. ಆಮೇಲೆ ದಾರಿಯಲ್ಲೊಂದು ಕಪಿಯು ಕಣ್ಣಿಗೆ ಬಿತ್ತು. ಅದು ಲಂಕಾಪಟ್ಟಣವು ಬೆಂದು ಹೋದಾಗ ಕುಂಭಕರ್ಣನನ್ನು ಬಿಟ್ಟು

ಬಂದ ನಿದ್ರೆಗೆ ಆಶ್ರಯವನ್ನು ಕೊಟ್ಟಂತೆ ತೋರುತ್ತಿತ್ತು. ಆದರೆ ಅದು ನಿದ್ರೆಯಾಗಿರಲಿಲ್ಲ. ವಾಯುವಿನ ಮತ್ತು ಅಂಜನಾದೇವಿಯ ಮಗ ನಾದ ಹನುಮಂತನು ಶ್ರೀರಾಮಧ್ಯಾನದಲ್ಲಿ ತತ್ಪರನಾಗಿ ಅಲ್ಲಿ ಅಲು ಗದೆ ಇದ್ದನು. ಅವನನ್ನು ನೋಡಿ ಭೀಮನು "ಎಲೋ ವಿನಯಗೇಡಿಯೆ ದಾರಿಗೆ ಅಡ್ಡವಾಗಿರುವ ನೀನು ಯಾರು? ದೂರ ಹೋಗು. ನನಗೆ ಸಿಟ್ಟುಬಂದರೆ ನನ್ನ ಗದೆಯು ನಿನ್ನ ಮೇಲೆ ಬೀಳಬಂದೀತು!" ಎಂದು ನಿಷ್ಠುರದಿಂದ ನುಡಿದನು.

ಭೀಮನಾಡಿದ ಈ ಮಾತನ್ನು ಕೇಳಿ ಹನುಮಂತನು ಸ್ವಲ್ಪ ಸ್ವಲ್ಪ ಕಣ್ಣುಬಿಡುತ್ತ, ಬಾಲವನ್ನು ಮಾತ್ರ ಸ್ವಲ್ಪ ಅಲ್ಲಾಡಿಸುತ್ತ ಭೀಮ ನನ್ನು ಕುರಿತು "ಹೇ ಭದ್ರ, ನಿನಗೆ ಮಂಗಲವಾಗಲಿ. ನಾನು ಮುದುಕ; ಇದರ ಮೇಲೆ ನಿದ್ರೆಯಲ್ಲಿದ್ದೇನೆ. ಏಳುವದೇ ಮೊದಲಾದ ಕೆಲಸ ಗಳಿಗೆ ತಕ್ಕಷ್ಟು ಶಕ್ತಿ ಇಲ್ಲ. ನಾನು ಜಾತಿಯಿಂದಲೂ ರೀತಿ ಯಿಂದಲೂ ವಾನರ. ಈ ನನ್ನ ಬಾಲದ ತುದಿಯನ್ನು ಎಳೆದು ಹಾಕಿ ನೀನು ನಿನ್ನ ಕೆಲಸವನ್ನು ಮಾಡಿಕೊಂಡು ಹೋಗು"– ಎಂದು ಹೇಳಿ ದನು. ಆಗ ಭೀಮನು ಗದೆಯನ್ನು ನೆಲದ ಮೇಲಿಟ್ಟು ನಡುಕಟ್ಟನ್ನು ಬಿಗಿಮಾಡಿಕೊಂಡು ತನ್ನ ಶಕ್ತಿಯಿದ್ದಷ್ಟೂ ಆ ಬಾಲವನ್ನೆಳೆದನು. ಅದೊಂದು ಕೂದಲೆಳೆಯಷ್ಟೂ ಕದಲಲಿಲ್ಲ. ಆಗ ಭೀಮನು ಬೆರ ಗಾದನು.

ನೀನು ಯಾರೆಂದು ಭೀಮನು ಕೇಳಿದಾಗ ತಾನು ವಾಯುದೇ ವನಿಂದ ಅಂಜನಾದೇವಿಯ ಹೊಟ್ಟೆಯಲ್ಲಿ ಹುಟ್ಟಿದವನೆಂದೂ ಶ್ರೀರಾಮ ಚಂದ್ರದೇವರ ಆಳೆಂದೂ ಉತ್ತರವನ್ನು ಕೊಟ್ಟನು. ಆಗ ಭೀಮನು 'ಆ ಮಾತು ನಿಜವಾದರೆ ಸಮುದ್ರವನ್ನು ಕಾಲುವೆಯಂತೆ ದಾಟಿದ ರೂಪವನ್ನು ತೋರಿಸು' ಎಂದು ಕೇಳಲು ಆಗ ಹನುಮಂತನು ಒಡನೆ ಬೆಳೆದು ಭೀಮನ ದಾರಿಗೆ ಮಾತ್ರವೇ ಅಲ್ಲದೆ ದೇವತೆಗಳ ದಾರಿಗೂ ಅಡ್ಡನಾದನು. ಹನುಮಂತನ ಈ ಅದ್ಭುತವಾದ ರೂಪವನ್ನು ನೋಡ ಲಾರದೆ ಭೀಮನು ಕಣ್ಣನ್ನು ಮುಚ್ಚಿಕೊಂಡು ಕೈಮುಗಿದುಕೊಂಡು

ಹರ್ಷದಿಂದ ಮೈ ಉಬ್ಬಿದವನಾಗಿ ವಿನಯದಿಂದ ಹನುಮಂತನನ್ನು ಕುರಿತು “ನಿನ್ನನ್ನು ನೋಡಬೇಕೆಂದು ನಾನು ಬಹು ದಿನಗಳಿಂದ ಬಯಸುತ್ತಿದ್ದೆನು. ನೀನು ನನ್ನ ಅಣ್ಣನು. ಶ್ರೀರಾಮಚಂದ್ರನ ಪಕ್ಷದಲ್ಲಿ ನಿಂತು ರಾಕ್ಷಸರಿಗೆ ಕಣ್ಣು ಕತ್ತಲೆಯನ್ನು ಹಿಡಿಸುವದರಲ್ಲಿ ನೀನು ಲಕ್ಷ್ಮಣನನ್ನು ಕೂಡ ಮೀರಿಸಿದ್ದರಿಂದ ರಾಮಚಂದ್ರನಿಗೆ ನಿನ್ನಲ್ಲಿಯೇ ಹೆಚ್ಚು ಪ್ರೇಮವೆಂದು ತಿಳಿಯುತ್ತೇನೆ. ಅಣ್ಣಾ, ನನ್ನ ಮಾತಿನ ತಪ್ಪನ್ನು ಮನ್ನಿಸು”– ಎಂದು ಅಡ್ಡಬಿದ್ದನು. ಆಗ ಹನುಮಂತನು ಅವನನ್ನು ಹಿಡಿದೆತ್ತಿ ಗಲ್ಲವನ್ನು ಹಿಡಿದು ಮುಂದಲೆಯನ್ನು ಮೂಸಿ ನೋಡಿದನು. ಹನುಮಂತನ ಈ ಪ್ರೇಮವನ್ನು ನೋಡಿ ಭೀಮನ ಕಣ್ಣುಗಳಿಂದಲೂ ಪ್ರೇಮಾಶ್ರು ಸುರಿಯಿತು.

ಹನುಮಂತನ ಅನುಗ್ರಹಕ್ಕೆ ಪಾತ್ರನಾಗಿ ಮುಂದೆ ಸಾಗುತ್ತಲೆ ಗಂಧಮಾದನಪರ್ವತವು ಎದುರಿಗೆ ಕಾಣಬಂತು. ಅಲ್ಲಿ ಭೀಮನು ಗದೆಯನ್ನು ಕಂಕುಳಲ್ಲಿಟ್ಟುಕೊಂಡು ಕೊಳದಲ್ಲಿಳಿದು ಅರಳಿದ ಕಮಲದ ಹೂಗಳನ್ನೆಲ್ಲ ಕೊಯ್ಯಲಾರಂಭಿಸಿದನು. ಆಗ ಅಲ್ಲಿನ ಕಾವಲುಗಾರರು ಅದನ್ನು ತಿಳಿದು ಅವನ ಮೇಲೇರಿ ಬಂದರು. ಭೀಮನು ಮೊದಲೊಂದು ಸಿಂಹನಾದವನ್ನು ಮಾಡಿ ಆಮೇಲೆ ಕೆಲವು ದಿನಗಳಿಂದ ಉಪವಾಸವ್ರತವನ್ನು ಮಾಡಿದ್ದ ತನ್ನ ಗದೆಗೆ ಆ ರಾಕ್ಷಸರನ್ನು ಪಾರಣೆಯಾಗಿ ಮಾಡಿದನು. ಆ ಸಮಯದಲ್ಲಿ ಆ ಪರ್ವತದ ಸುತ್ತಲೂ ರಕ್ತದ ಹೊಳೆಯೇ ಹರಿದುಹೋಯಿತು. ಇತ್ತ ಭೀಮನು ಆ ಹೂಗಳನ್ನು ತಂದು ಅನುರಾಗಸೂಚಕವಾಗಿ ಏಕಾಂತದಲ್ಲಿ ದ್ರೌಪದಿಗೆ ಕೈಗಾಣಿಕೆಯನ್ನಿತ್ತನು.

## ಜಟಾಸುರನ ಸಾವು

ಆಮೇಲೆ ಭೀಮನು ಒಮ್ಮೆ ಬೇಟೆಗಾಗಿ ಆ ಅಡವಿಯಲ್ಲಿ ತಿರುಗುತ್ತಿದ್ದನು. ಆ ಸಮಯವನ್ನು ನೋಡಿಕೊಂಡಿದ್ದು ಜಟನೆಂಬ ಒಬ್ಬ ಅಸುರನು ಧರ್ಮರಾಯನಿದ್ದ ಎಲೆಯ ಮನೆಗೆ ಬಂದು ದ್ರೌಪದಿಯನ್ನೂ ಯುಧಿಷ್ಠಿರನಕುಲಸಹದೇವರನ್ನೂ ಹೆಗಲ ಮೇಲಿಟ್ಟುಕೊಂಡು ಯಾವದೋ ಒಂದು ಅಡ್ಡದಾರಿಯನ್ನು ಹಿಡಿದು ಪಲಾಯನಮಾಡಿದನು.

ಕೆಲವು ದಿನಗಳಿಂದ ಘಟೋತ್ಕಚನೂ ಈ ಕುಟುಂಬದಲ್ಲಿಯೇ ವಾಸ ಮಾಡುತ್ತಿದ್ದು ಆ ಸಮಯದಲ್ಲಿ ಅವನೂ ಎಲ್ಲಿಯೋ ಹೋಗಿದ್ದನು. ಎಲೆಯ ಮನೆಗೆ ಹಿಂದಿರುಗಿ ಬರುತ್ತಲೆ ಘಟೋತ್ಕಚನಿಗೆ ಈ ಅನರ್ಥವು ಗೊತ್ತಾಯಿತು. ಒಡನೆ ಅವರನ್ನು ಅವನು ಹುಡುಕಿಕೊಂಡು ಹೊರಟನು. ಅವನಿಗೆ ಅವರು ಎಲ್ಲಿಯೂ ಕಾಣಬರಲಿಲ್ಲ. ಆದ್ದರಿಂದ ಅವನು ಸುಮ್ಮನೆ ಕಣ್ಣೀರು ಬಿಡುತ್ತ ತಲೆಯ ಮೇಲೆ ಕೈಹೊತ್ತು ಕೊಂಡು ಕುಳಿತುಕೊಳ್ಳಬೇಕಾಯಿತು.

ಜಟಾಸುರನು ಸ್ವಲ್ಪ ದೂರ ಹೋದಮೇಲೆ ಧರ್ಮರಾಯನ ಮಹಿಮೆಯಿಂದ ಅವನ ಕಾಲುಗಳ ಶಕ್ತಿಯೇ ಕುಂದಿಹೋಯಿತು. ಕೊನೆಗೆ ಅವನು "ಇವರನ್ನು ಇಲ್ಲಿಯೇ ಕೊಂದು ತಿಂದು ಬಿಡಲೆ?" ಎಂದು ಯೋಚಿಸುವದರಲ್ಲಿದ್ದನು. ಹೀಗಿರುವಾಗ ದೈವಯೋಗದಿಂದ ಹಿಂದಿರುಗಿ ಬರುತ್ತಿದ್ದ ಭೀಮನು ಅಲ್ಲಿಗೆ ಬಂದನು. ಜಟಾಸುರನಿಗೂ ಅವನಿಗೂ ಕೈ ಕೈ ಕೂಡಿತು. ಆಗ ಬೇರೆ ಉಪಾಯವಿಲ್ಲದೆ ಜಟಾಸುರನು ತಾನು ಹೊತ್ತಿದ್ದವರನ್ನೆಲ್ಲ ಕೆಳಕ್ಕೆ ಇಳಿಸಿದನು. ಒಡನೆ ಭೀಮನು ತನ್ನ ವಜ್ರಮುಷ್ಟಿಯಿಂದ ಜಟಾಸುರನ ತಲೆಗೆ ಮಟ್ಟುತ್ತಲೆ ಆ ತಲೆ ಚೂರುಚೂರಾಗಿ ಬಿದ್ದದ್ದಲ್ಲದೆ ಅದರ ಭಾರಕ್ಕೆ ನೆಲವು ಕೂಡ ಕುಸಿಯಿತು. ಆಗ ದ್ರೌಪದಿಯು ತನ್ನ ಪತಿಯ ಪರಾಕ್ರಮಕ್ಕೆ ಬೆರಗಾದಳು. ಎಲ್ಲರೂ ಆ ಕುತ್ತದಿಂದ ಪಾರಾದರು.

## ದುರ್ಯೋಧನನ ಮಾನಭಂಗ

ಆಮೇಲೆ ಧರ್ಮರಾಯ ಮೊದಲಾದವರು ಹಿಮವತ್ಪರ್ವತದಲ್ಲಿ ಬಹುಕಾಲ ವಾಸಮಾಡಿದರು. ಅಷ್ಟರಲ್ಲಿ ಅರ್ಜುನನೂ ದೇವಲೋಕದಿಂದ ಜಯಶೀಲನಾಗಿ ಹಿಂದಿರುಗಿ ಬಂದು ಅವರನ್ನು ಸೇರಿಕೊಂಡನು. ಅರ್ಜುನನ ಏಳಿಗೆಯನ್ನು ಕೇಳಿ ಎಲ್ಲರೂ ಹಿಗ್ಗಿದರು. ಕೆಲವು ದಿವಸದ ಮೇಲೆ ಅವರೆಲ್ಲರೂ ದ್ವೈತವನಕ್ಕೆ ಬಂದರು. ಅಲ್ಲಿ ಧರ್ಮರಾಯನು ದ್ರೌಪದಿಯೊಡನೆ ಅನೇಕ ನಿಯಮಗಳನ್ನು ಹಿಡಿದು ಸೊರಗಿದವನಾಗಿ ಎಲ್ಲರ ಕಣ್ಣಿಗೂ ಹಬ್ಬವಾಗಿದ್ದನು.

ಪಾಂಡವರು ಹೀಗೆ ತಮ್ಮಷ್ಟಕ್ಕೆ ತಾವಿರುವಾಗ ಬಡತನದಿಂದಿ ಪುವ ಅವರ ಮುಂದೆ ತಮ್ಮ ಸಿರಿಯ ಸೊಗಸನ್ನು ಬೀರಿ ಅವರಿಗೆ ಹೊಟ್ಟೆಯುರಿಯನ್ನುಂಟುಮಾಡಬೇಕೆಂದು ದುರ್ಯೋಧನನ ಮನಸ್ಸು ಕುತೂಹಲಗೊಂಡಿತು. ಕಾಡಿನಲ್ಲಿರುವ ಆಕಳ ಮಂದೆಗಳ ಯೋಗಕ್ಷೇ ಮವನ್ನು ನೋಡಿಕೊಂಡು ಬರುವದೆಂಬ ಒಂದು ನೆವವೇರ್ಪಟ್ಟಿತು. ದುರ್ಯೋಧನನು ತನ್ನ ಸೇನೆಯನ್ನೆಲ್ಲ ತೆಗೆದುಕೊಂಡು ಸರ್ವವೈಭವ ಸಮೇತನಾಗಿ ಹೊರಟನು. ಹೀಗೆ ಬಂದ ದುರ್ಯೋಧನನು ತನ್ನ ಪರಿವಾ ರವನ್ನೆಲ್ಲ ನಿಲ್ಲಿಸಿಕೊಂಡು ಎತ್ತರವಾದೊಂದು ಆಲದ ಮರದ ಕೆಳಗೆ ನಿಂತುಕೊಂಡು ವೀಣಾಗಾನವನ್ನು ಕೇಳುತ್ತಿದ್ದನು.

ದುರ್ಯೋಧನನು ಹೀಗೆ ಹೊಟ್ಟೆಯ ಕಿಚ್ಚಿನಿಂದ ಮೆರೆಯುವದು ಇಂದ್ರನ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವನ ಸೊಕ್ಕನ್ನು ಇಳಿಸ ಹೇಳಿ ತನ್ನ ಕಡೆಯ ಚಿತ್ರಸೇನನೆಂಬುವನನ್ನು ಕಳುಹಿಸಿದನು. ಚಿತ್ರ ಸೇನನು ತನ್ನ ದೊಡ್ಡ ದಂಡನ್ನೆಬ್ಬಿಸಿಕೊಂಡು ಬಂದು—ಹುಲಿಯು ಜಿಂಕೆ ಗಳನ್ನೋಡಿಸುವಂತೆ— ದುರ್ಯೋಧನನ ಸೇನೆಯನ್ನು ಕ್ಷಣಮಾತ್ರದಲ್ಲಿ ಚದರಿಸಿಬಿಟ್ಟನು. ಸೈನಿಕರು ಕಾಲಿಗೆ ಬುದ್ಧಿಯನ್ನು ಹೇಳಿದ್ದನ್ನು ನೋಡಿ ಜಗದೇಕವೀರನೆಂದು ಹೊಗಳಿಸಿಕೊಳ್ಳುತ್ತಿದ್ದ ಕರ್ಣನು ನಕ್ಕು ಕಾಲಪೃಷ್ಠವೆಂಬ ತನ್ನ ಧನುಸ್ಸನ್ನು ಹಿಡಿದು ಸಿಟ್ಟಿನಿಂದ ಆ ಹಗೆಯ ಮೇಲೆ ನುಗ್ಗಿ ಬಂದನು. ಕರ್ಣನ ಬಾಣಗಳ ಹೊಡೆತದಿಂದ ಗಂಧ ರ್ವರ ಮೈ ಎಲ್ಲ ರಕ್ತಮಯವಾಯಿತು. ಆಗ ಗಂಧರ್ವರು ಕರ್ಣನ ಮೇಲೆ ಬಾಣಗಳ ಮಳೆಗರೆಯುತ್ತಲೆ ಆ ಚಿತ್ರಸೇನನ ಬಾಣದ ಓಟ ದೊಡನೆ ಮೇಲಾಟಮಾಡುವವನಂತೆ ಕರ್ಣನು ಓಡುವದಕ್ಕೆ ಮೊದ ಲುಮಾಡಿದನು. ಕೌರವರ ದಂಡಿನಲ್ಲೆಲ್ಲ ಗೋಳಾಟವೆದ್ದಿತು. ಆ ಗಂಧರ್ವಭಟರು ದುರ್ಯೋಧನನನ್ನು ಹಗ್ಗಗಳಿಂದ ಕಟ್ಟಿ ಅಂತರಿಕ್ಷಕ್ಕೆಳೆ ದುಕೊಂಡು ಹೋದರು.

ತಮ್ಮ ಒಡೆಯನಾದ ದುರ್ಯೋಧನನನ್ನು ಹಗೆಗಳು ಸೆಳೆದೊ ಯ್ಯುವದನ್ನು ನೋಡಿದಾಗ ಅವರ ದಂಡಿನವರೆಲ್ಲ ತಲೆಯನ್ನು ಬಗ್ಗಿಸ

ಬೇಕಾಗಿತ್ತಾದರೂ ಭಂಡರಾದ ಅವರು ತಲೆಯನ್ನು ಎತ್ತಿಕೊಂಡು ಅವನನ್ನೇ ನಿಟ್ಟಿಸುತ್ತಿದ್ದರು. ಆ ಸಮಯದಲ್ಲಿ ಅಂತಃಪುರದ ಸ್ತ್ರೀಯರು ಸುರಿಸಿದ ಕಣ್ಣೀರಿಂದ ಆ ಪ್ರಾಂತವೆಲ್ಲ ಕೆಸರಾಯಿತು. ಆ ಮೇಲೆ ಆ ಹೆಂಗಸರೆಲ್ಲ ಎದೆಯನ್ನು ಬಡಿದುಕೊಳ್ಳುತ್ತ ಧರ್ಮರಾಯನ ಬಳಿಗೆ ಬಂದು ಉದ್ದಕ್ಕೆ ಅಡ್ಡಬಿದ್ದು ಬಿಕ್ಕುತ್ತ ಹೇಳಿದ್ದೇನೆಂದರೆ:— "ಎಲೈ ಸ್ವಾಮಿಯೆ, ನಿನ್ನನ್ನು ನೋಡಬೇಕೆಂದೇ ನಿನ್ನ ತಮ್ಮನಾದ ದುರ್ಯೋಧನನು ಈ ದಿನ ಇಲ್ಲಿಗೆ ಬಂದಿದ್ದನು. ನಿರಪರಾಧಿಯಾದ ಅವನನ್ನು ಧೂರ್ತನಾದ ಯಾವನೋ ಒಬ್ಬ ಗಂಧರ್ವನು ಸೆರೆಹಿಡಿದುಕೊಂಡು ಮೇಲಕ್ಕೊಯ್ಯುತ್ತಿದ್ದಾನೆ. ಆದ್ದರಿಂದ ನಿನಗೆ ಶರಣುಬಂದಿದ್ದೇವೆ. ನಮ್ಮ ಮಂಗಲಸೂತ್ರಗಳನ್ನು ಕಾಪಾಡು."

ಹೀಗೆ ಅವರು ದೈನ್ಯದಿಂದ ಕೇಳಿಕೊಂಡೊಡನೆ ಧರ್ಮರಾಯನು ಕನಿಕರಗೊಂಡು ತನ್ನ ತಮ್ಮಂದಿರ ಮುಖವನ್ನು ನೋಡುತ್ತಲೆ ಅರ್ಜುನನು ಆ ಗಂಧರ್ವನ ಮೇಲೆ ಹೊರಟು "ಕೈಯಲ್ಲಿ ವೀಣೆಯನ್ನು ಹಿಡಿಯುವವರಾದ ನೀವೆಲ್ಲಿ! ಧನುಸ್ಸನ್ನು ಹಿಡಿಯುವವರಾದ ನಾವೆಲ್ಲಿ!! ಈಶ್ವರನ ತಲೆಯ ಮೇಲೆ ಧನುಸ್ಸಿನ ಮುದ್ರೆಯನ್ನೊತ್ತಿರುವ ಅರ್ಜುನನು ಈ ಕಾಡಿನಲ್ಲಿರುವನೆಂಬುದು ನಿಮ್ಮ ಕಿವಿಯಲ್ಲಿ ಬಿದ್ದಿರಲಾರದು. ಆದ್ದರಿಂದ ಈ ಸಾಹಸವನ್ನು ಮಾಡಿದ್ದೀರಿ. ನನ್ನ ಸಹೋದರನಾದ ದುರ್ಯೋಧನನನ್ನು ನೀವು ಬಿಡದಿದ್ದರೆ ನನ್ನ ಗಾಂಡೀವಧನುಸ್ಸಿನ ಪ್ರಭಾವದಿಂದ ದೇವೇಂದ್ರನು ಕೂಡ ವೀಣೆಯನ್ನು ಹಿಡಿದುಕೊಂಡು ತನ್ನ ಹಾಡನ್ನು ತಾನೇ ಹಾಡುವಂತೆ ಮಾಡುತ್ತೇನೆ"— ಎಂದು ಉಬ್ಬಿದ್ದು ನುಡಿದನು. ಇದನ್ನು ಕೇಳಿ ಗಂಧರ್ವರು ಹಿಂದಿರುಗಿ ವೀಣೆಯನ್ನು ಹೆಗಲಿಗೆ ಕಟ್ಟಿ ಕೈಯಲ್ಲಿ ಧನುಸ್ಸನ್ನು ಹಿಡಿದರು. ಆಕಾಶಮಾರ್ಗದಲ್ಲಿ ನೋಡುತ್ತಿದ್ದ ಸಾಧ್ಯರೇ ಮೊದಲಾದ ಗುಂಪಿನವರಿಗೆಲ್ಲ ರೋಮಾಂಚವುಂಟಾಗುವಂತೆ ಅವರಿಬ್ಬರಿಗೂ ದೊಡ್ಡ ಯುದ್ಧವು ನಡೆಯಿತು.

ಗಾಂಡೀವದ ಹೆದೆಯಿಂದ ಹೊರಟ ಬಾಣಗಳು ತಮ್ಮ ಮೈಯ್ಯಲ್ಲೆಲ್ಲ ತೂರುವದಕ್ಕೆ ತೊಡಗುತ್ತಲೇ ಗಂಧರ್ವರ ತಲೆಗೇರಿದ್ದ ಸೊಕ್ಕು

ಇಳಿಯಿತು. ಆಗ ಅವರ ವೀಣೆಗಳೆಲ್ಲ ಚೂರುಚೂರಾಗಿ ನೆಲದ ಮೇಲೆ ಬಿದ್ದವು. ಗಂಧರ್ವರ ಬಾಣಪ್ರಯೋಗಕ್ಕೂ ಅರ್ಜುನನ ಬಾಣಪ್ರಯೋಗಕ್ಕೂ ವ್ಯತ್ಯಾಸವೇನೆಂದರೆ: ಗಂಧರ್ವರು ಬಿಟ್ಟ ಬಾಣಗಳು ಗುರಿಯ ಹತ್ತಿರಕ್ಕೆ ಮಾತ್ರ ಹೋಗುತ್ತಿದ್ದವು; ಅರ್ಜುನನು ಬಿಟ್ಟ ಬಾಣಗಳು ಗುರಿಯನ್ನು ಭೇದಿಸಿ ಮತ್ತೆ ಅವನ ಬಳಿಗೆ ಹಿಂದಿರುಗುತ್ತಿದ್ದವು. ಆಗ ಚಿತ್ರಸೇನನು ಸಮಾಧಾನವನ್ನು ತಂದುಕೊಂಡು ಅರ್ಜುನನನ್ನು ಹೊಗಳಿ ದುರ್ಯೋಧನನನ್ನು ಹಿಂದಕ್ಕೆ ಕೊಟ್ಟನು. ಆ ಹಗ್ಗದ ಕಟ್ಟುಗಳಿಂದ ಕೂಡಿದ ದುರ್ಯೋಧನನನ್ನು ಭೀಮಾರ್ಜುನರು ಧರ್ಮರಾಯನ ಬಳಿಗೆ ತಂದರು.

ಮರದ ಮರೆಯಲ್ಲಿ ನಿಂತಿದ್ದ ದ್ರೌಪದಿಯು ದುರ್ಯೋಧನನನ್ನು ನೋಡಿ ಹುಸಿನಗೆಯನ್ನು ನಕ್ಕಳು. ಆಗ ಧರ್ಮರಾಯನು "ಮಗು, ದುರ್ಯೋಧನ, ನೀನು ವೀರಶ್ರೇಷ್ಠನೆಂದು ಮೂರು ಲೋಕದಲ್ಲಿಯೂ ಹೆಸರುಗೊಂಡವನು. ನೀನು ನಮ್ಮ ಕುಲದಲ್ಲಿ ಅನೇಕ ಒಡಹುಟ್ಟಿದವರೊಡನೆ ಹುಟ್ಟಿದ್ದಿ. ಇದರ ಮೇಲೆ ನೀನು ಚಕ್ರಾಧೀಶ್ವರ. ಇಂಥ ನಿನಗೆ ನಿನ್ನ ಕೀರ್ತಿಗೆ ಕ್ಷಯರೋಗವಾಗಿ ನೀಚರಿಂದ ಈ ಬಗೆಯ ಅವಮಾನವಾಗಬಹುದೆ?"– ಎಂದು ಮುಂತಾಗಿ ಸಹಾನುಭೂತಿಯ ಮಾತಾಡಿ ಭೀಮನಿಂದ ಆ ಕಟ್ಟನ್ನು ಬಿಡಿಸಿದನು. ಆಮೇಲೆ ದುರ್ಯೋಧನನು ತಲೆಯನ್ನು ಬಗ್ಗಿಸಿಕೊಂಡು ಊರ ದಾರಿಯನ್ನು ಹಿಡಿದು ಹೊರಟು ನಡುವೆ ತಾನಿನ್ನು ಊರನ್ನು ಹೊಗುವದಿಲ್ಲವೆಂದು ಹೇಳಿ ಪ್ರಾಯೋಪವೇಶವ್ರತವನ್ನು ಹಿಡಿದನು. ಆಗ ಅವನಿಗೆ ಕನಸಿನಲ್ಲಿ ಕೆಲವರು ದೈತ್ಯರು ಬಂದು ನೆರವಾಗುತ್ತೇವೆಂದು ಹೇಳಿದಂತೆಯೂ ಬಂಧುಗಳೆಲ್ಲರೂ ಶರೀರವನ್ನು ಬಿಡಬೇಡವೆಂದು ತಡೆದಂತೆಯೂ ಅನುಭವವಾಯಿತು. ಇದರಿಂದ ಅವನು ಮತ್ತೆ ಚೇತರಿಸಿಕೊಂಡು ದಂಡಿನೊಡನೆ ತನ್ನ ರಾಜಧಾನಿಗೆ ಬಂದು ಮುಟ್ಟಿ ಇನ್ನು ಮುಂದೆಯಾದರೂ ತನಗೆ ಆ ಗಂಧರ್ವರ ಸೋಂಕು ತಗಲದಿರಲೆಂದು ಬೇಡಿಕೊಳ್ಳುವಂತೆ ಇಂದ್ರನನ್ನು ಕುರಿತು

ಅಮೃತದಂತೆ ಮಧುರವಾದ ಆಜ್ಯಪುರೋಡಾಶಾದಿಗಳನ್ನು ಉಪಯೋಗಿಸಿ ಪೌಂಡರೀಕವೆಂಬ ಯಾಗವನ್ನು ಮಾಡಿದನು.

## ಜಯದ್ರಥನ ಕೊಲೆ

ಇತ್ತ ಧರ್ಮರಾಯನು ದ್ವೈತವನವನ್ನು ಬಿಟ್ಟು ಕಾಮ್ಯಕವನಕ್ಕೆ ಹಿಂದಿರುಗಿದನು. ಭೀಮನು ಅಲ್ಲಿಯ ಕಿರ್ಮೀರನೆಂಬ ರಾಕ್ಷಸನನ್ನು ಮೊದಲೇ ಕೊಂದಿದ್ದ ಕಾರಣ ಈಸಲ ಧರ್ಮರಾಯನು ಅಲ್ಲಿಗೆ ಹೋಗುವ ಹೊತ್ತಿಗೆ ಮುನಿಗಳೆಲ್ಲರೂ ನಿರ್ಭಯದಿಂದ ವೇದಘೋಷಗಳನ್ನು ಮಾಡಿಕೊಂಡಿದ್ದರು. ಧರ್ಮರಾಯನು ಅಲ್ಲಿಗೆ ಬರುತ್ತಲೆ ತೃಣಬಿಂದುವೆಂಬ ಮುನಿಯು ಅವನಿಗೆ ಹಣ್ಣುಹಂಪಲುಗಳನ್ನು ಕೊಟ್ಟು ಸತ್ಕರಿಸಿ ಅವನನ್ನು ತನ್ನ ಆಶ್ರಮದಲ್ಲಿ ನಿಲ್ಲಿಸಿಕೊಂಡನು. ಶ್ರೀಕೃಷ್ಣನ ಅನುಗ್ರಹದಿಂದ ಅಕ್ಷಯವಸ್ತ್ರಗಳನ್ನು ಪಡೆದ ದ್ರೌಪದಿಯು ಬಂದಿರುವಳೆಂಬ ಸುದ್ದಿ ಹರಡುತ್ತಲೆ ಮುನಿಗಳ ಹೆಂಗಸರೆಲ್ಲರೂ ಅವಳನ್ನು ನೋಡುವ ಕುತೂಹಲದಿಂದ ಆ ಎಲೆಯ ಮನೆಗೆ ಬಂದು ನಾರುಮಡಿಯನ್ನುಟ್ಟಿದ್ದ ದ್ರೌಪದಿಯನ್ನು ನೋಡಿ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಯಾವ ದ್ರೌಪದಿಯ ಕೈ ಮುಟ್ಟಿದ ಮಾತ್ರದಿಂದಲೆ ಬಹಳ ಸಣ್ಣ ಪಾತ್ರೆಯಲ್ಲಿ ಎಷ್ಟು ತೆಗೆದುಕೊಂಡರೂ ಮುಗಿಯದಷ್ಟು ದಿವ್ಯಾನ್ನವು ಆ ಕಾಡಿಗೆ ಬಂದ ಅತಿಥಿಗಳಿಗೆಲ್ಲ ಸಾಕುಸಾಕೆನ್ನಿಸಿತೊ ಆ ದ್ರೌಪದಿಯ ಕೈಯಲ್ಲಿ ಕಾಡಿನ ಹಣ್ಣುಹಂಪಲುಗಳನ್ನಿಡುವಾಗ ಆ ಮುನಿಪತ್ನಿಯರು ಬಹಳನಾಗಿ ನಾಚಿಗೊಂಡರು.

ಹೀಗಿರುವಾಗ ಧರ್ಮರಾಯ ಮೊದಲಾದವರೆಲ್ಲ ಬೇಟೆಗಾಗಿ ಹೊರಗೆ ಹೋಗಿದ್ದ ಒಂದು ಸಮಯದಲ್ಲಿ ಸಿಂಧುರಾಜನು ಆ ಎಲೇ ಮನೆಯ ಬಳಿಗೆ ಬಂದು ದ್ರೌಪದಿಯನ್ನು ನೋಡಿ ಕೆಡಿದ ಮನಸ್ಸುಳ್ಳವನಾಗಿ ಅವಳನ್ನು ಎತ್ತಿಕೊಂಡು ಹೋಗಿ ತನ್ನ ರಥದ ಮೇಲೆ ಕೂತುಕೊಂಡನು. ಆಗ ದ್ರೌಪದಿಯು ಹೆಣ್ಣುಹಕ್ಕಿಯಂತೆ ಗೋಳಿಡುತ್ತಲೂ

ಬಯ್ಯುತ್ತಲೂ ಇದ್ದಳು. ಆದರೂ ಅವನು ತನ್ನ ಕೈಯ ಚಾಟಿಯನ್ನು ಕುದುರೆಗಳ ಮೇಲೆ ಆಡಿಸಿದನು. ಒಡನೆ ಅವು ನಾಗಾಲೋಟವನ್ನು ತೆಗೆದವು. ಕಣ್ಣುಮುಚ್ಚಿ ಬಿಡುವಷ್ಟರಲ್ಲಿ ಆ ರಥವು ಎಷ್ಟೋ ದೂರ ಹೋಯಿತು. ಇತ್ತ ಧರ್ಮರಾಯನು ಹಿಂದಿರುಗಿ ಬರುತ್ತಲೆ ದ್ರೌಪದಿಯ ಸಮಾಚಾರವು ಅವನ ಕಿವಿಗೆ ಬಿತ್ತು. ಒಡನೆ ಅವನು ಕಾಳ್ಗಿಚ್ಚಿನ ಬೇಗೆಯೊಳಗೆ ಸಿಕ್ಕಿದವನಂತಾಗಿ ಭೀಮಾರ್ಜುನರ ಕಡೆಗೆ ನೋಡಿದನು. ಆಗ ತಾನೆ ಬೇಟೆಯಿಂದ ಹಿಂತಿರುಗಿದ್ದ ಅವರು ಆಯಾಸವನ್ನು ಲೆಕ್ಕಿಸದೆ ರೋಷದಿಂದ ಕಣ್ಣುಗಳಲ್ಲಿ ಕೆಂಡವನ್ನು ಸುರಿಸುತ್ತ ಅವನನ್ನು ಬೆನ್ನಟ್ಟಿಕೊಂಡು ಹೊರಟರು. ಅರ್ಜುನನ ಧನುಷ್ಟಂಕಾರದ ಸದ್ದು ಕಿವಿಗೆ ಬೀಳುತ್ತಲೆ ಆ ಸೈಂಧವನು ಹೆದರಿ ದ್ರೌಪದಿಯನ್ನು ಕೆಳಕ್ಕಿಳಿಸಿ ತಾನು ತಲೆ ತಪ್ಪಿಸಿಕೊಂಡು ಓಡುತ್ತಿದ್ದನು. ಆಗ ಭೀಮನು ಓಡಿ ಹೋಗಿ ಅವನನ್ನು ಅಡ್ಡಗಟ್ಟಿದನು.

ಭೀಮನ ಕೈಯಿಂದ ತಪ್ಪಿಸಿಕೊಳ್ಳುವದು ಅವನಿಂದ ಆಗಲಿಲ್ಲ. ಮಾಡಬಾರದ ಕೆಲಸವನ್ನು ಮಾಡಿದಂಥ ಆ ಖೂಳನ ಜುಟ್ಟನ್ನು ಹಿಡಿದು ಕೆಳಕ್ಕೆ ಕೆಡವಿ ಭೀಮನು ಅವನನ್ನು ತನ್ನ ಎಡಗಾಲಿನಿಂದ ಹೊಸಕಿದನು. ಭೀಮಾರ್ಜುನರು ಅವನನ್ನು ಧರ್ಮರಾಯನ ಬಳಿಗೆ ಎಳೆದು ತಂದಾಗ ಅವನ ಜುಟ್ಟೆಲ್ಲ ಕಿತ್ತುಹೋಗಿತ್ತು. ತಲೆ ಬಗ್ಗಿಸಿಕೊಂಡು ಮುಂದೆ ನಿಂತಿದ್ದ ಅವನನ್ನು ನೋಡಿ ಧರ್ಮರಾಯನು "ಎಲೋ ನೀಚ, ನಿನ್ನ ಹೆಂಡತಿಯಾದ ದುಃಶಲೆಯನ್ನು ನೋಡಿ ನಿನ್ನ ಜೀವವನ್ನುಳಿಸಿರಬೇಕಾಗಿರುವದು. ಆ ನನ್ನ ತಂಗಿಗೆ ವೈಧವ್ಯವು ಬರಬಾರದೆಂದು ನಿನ್ನನ್ನು ಬಿಟ್ಟಿರುವೆನು. ಇನ್ನು ಮೇಲೆ ಇಂಥ ಕೆಟ್ಟ ಕೆಲಸಕ್ಕೆ ಕೈ ಹಾಕಬೇಡ" ಎಂದು ವಾಗ್ದಂಡನೆಯನ್ನು ಮಾಡಿ ಕೈಬಿಟ್ಟನು. ಇದರಿಂದ ಖಿನ್ನನಾದ ಸೈಂಧವನು ಆಗ ಹಿಮಾಲಯಾಪರ್ವತದಲ್ಲಿ ನಿಂತು ತಪಸ್ಸನ್ನು ಮಾಡಿ ಈಶ್ವರನನ್ನು ಪ್ರತ್ಯಕ್ಷಮಾಡಿಕೊಂಡು ಯುದ್ಧದಲ್ಲಿ ಪಾಂಡವರನ್ನು ತಡೆಯುವಷ್ಟು ಮಾತ್ರದ ವರವನ್ನು ಪಡೆದುಕೊಂಡನು. ಸೂರ್ಯಕಿರಣಗಳು ಹಿಮಂತಋತುವಿನಿಂದ ಬಿಡುಗಡೆಯನ್ನು ಹೊಂದಿದ ಕನು

ಲವನ್ನು ಹೊಂದುವಂತೆ ಪಾಂಡವರು ದ್ರೌಪದಿಯನ್ನು ಹೊಂದಿ ಸಂತೋ
ಷಗೊಂಡರು.

## ಕರ್ಣನು ಕವಚಕುಂಡಲಗಳನ್ನು ದಾನಮಾಡಿದ್ದು

ಝಗಝಗಿಸುವ ಮೈಹೊಳಪುಳ್ಳ ಸೂರ್ಯನು ಒಂದು ರಾತ್ರಿ ತನ್ನ
ವರಪುತ್ರನಾದ ಕರ್ಣನ ಬಳಿಗೆ ಬಂದನು. ಕರ್ಣನು ಅವನಿಗೆ ಎರ
ಗಿದ್ದೂ ಆಯಿತು; ಸೂರ್ಯನು ಅವನಿಗೆ ಹರಸಿದ್ದೂ ಆಯಿತು. ಆಗ
ಸೂರ್ಯನು ಕರ್ಣನನ್ನು ಕುರಿತು “ಮಗು, ನಾನು ಸೂರ್ಯನು.
ಸದ್ಗುಣಸಂಪನ್ನನಾದ ನೀನು ಪೃಥೆಯಲ್ಲಿ ನನ್ನನುಗ್ರಹದಿಂದ ಹುಟ್ಟಿದ
ವನಾಗಿದ್ದಿ. ಆದ್ದರಿಂದ ನಾನು ಏಕಾಂತದಲ್ಲಿ ಹೇಳುವ ಈ ಮಾತನ್ನು
ಕೇಳು. ಮಕ್ಕಳಿಗೆ ಹಿತವನ್ನು ಹೇಳುವದು ತಂದೆಗೆ ಸಹಜವಲ್ಲವೆ?
ನಿನಗೆ ಇರುವ ಈ ಬಗೆಯ ಕವಚಕುಂಡಲಗಳು ಜಗತ್ತಿನಲ್ಲಿ
ಬೇರೆ ಯಾರಿಗೂ ಇಲ್ಲ. ಆದ್ದರಿಂದ ಮುಂದೆ ಇಂದ್ರನು ಒಬ್ಬ ಬಡ
ಹಾರವನಾಗಿ ಕಾಣಿಸಿಕೊಂಡು ಇವನ್ನು ಬೇಡುವ ಸಂಭವವು ತೋರು
ತ್ತದೆ. ನೀನು ಅವನ ಮಾತಿಗೆ ಹೂಂಗುಟ್ಟಬೇಡ. ಏಕೆಂದರೆ ಇವೆರ
ಡನ್ನು ನೀನು ಕಳೆದುಕೊಂಡರೆ ಆಮೇಲೆ ಹಗೆಗಳು ನಿನ್ನನ್ನು ಬಹು
ಸುಲಭವಾಗಿ ಗೆದ್ದುಬಿಡುವರು”— ಎಂದು ಹೇಳಿದನು. ಈ ಮಾತು
ಗಳನ್ನು ಕೇಳುತ್ತಲೆ ಕೊಡುವವರಲ್ಲಿ ಹೆಸರಾದ ಕರ್ಣನಿಗೆ ನಗು ಬಂತು.
ಆಗ ಆತನು ಕೈ ಮುಗಿದುಕೊಂಡು ಸೂರ್ಯನನ್ನು ಕುರಿತು “ದೇ
ದೇವ, ಬೇಡಿದವರಿಗೆ ಇಲ್ಲವೆಂದು ಹೇಳುವಂತೆ ಬುದ್ಧಿಯನ್ನು ಹೇಳುವ
ದಕ್ಕೆ ನಿನ್ನ ನಾಲಿಗೆ ಹೇಗೆ ಬಂತೋ ನಾನು ಕಾಣೆನು. ಜಗತ್ತಿನಲ್ಲಿ ದೇಹ
ವನ್ನಿತ್ತಿದ್ದಕ್ಕೆ ಕೀರ್ತಿಯೇ ಫಲ. ಆ ಕೀರ್ತಿಯನ್ನು ಪ್ರಯತ್ನಪೂರ್ವಕ
ವಾಗಿ ಬಯಸಬೇಕು. ಧೈರ್ಯ, ಶೌರ್ಯ, ಮೊದಲಾದ ಗುಣಗಳಿ
ದ್ದರೂ ಯಶಸ್ಸಿಯಿಲ್ಲದವನನ್ನು ಜನರು ಆದರಿಸುವದಿಲ್ಲ. ದಾನವನ್ನು
ಮಾಡುವ ಸ್ವಭಾವವುಳ್ಳವನಿಗೆ ಯಾಚಕರು ಕಾಣುತ್ತಲೆ ಮುಖವು
ಅರಳುತ್ತದೆ; ಕೈ ಮುಂದಾಗುತ್ತದೆ. ಇದನ್ನು ತಡೆಯಲು ಯಾರಿಗೆ

ಸಾಧ್ಯ? ಬೇಡಿದ್ದನ್ನು ಇಲ್ಲವೆಂದು ಹೇಳುತ್ತಲೆ ಆ ದಾನಿಯ ಪ್ರಾಣಗಳು ನಿರಾಶೆಯಿಂದ ಹಿಂದಿರುಗಿದ ಯಾಚಕನ ಬೆನ್ನು ಹಿಡಿದೇ ಹೊರಬಿದ್ದು ಹೋಗುವವು. ಆದ್ದರಿಂದ ಇಂದ್ರನು ಬಂದು ಬೇಡಿದಾಗ ಅವನಿಗೆ ಇವುಗಳನ್ನು ಕೊಟ್ಟು ಬದುಕುವದೇ ಒಳ್ಳೆಯ ಲಾಭವಲ್ಲವೆ? ಚಿಂತಿಸಿದ್ದನ್ನು ಕೊಡುವ ಚಿಂತಾಮಣಿಯೆಂಬ ರತ್ನವು ಯಾರ ಆಸ್ಥಾನದ ಹೊಸಿಲಕಲ್ಲಾಗಿದೆಯೋ, ಕಲ್ಪನೆ ಮಾಡಿದ್ದನ್ನೆಲ್ಲ ನೆರವೇರಿಸುವ ಕಲ್ಪವೃಕ್ಷವು ಯಾರ ಉಪವನದ ಬೇಲಿಯ ಮರವಾಗಿದೆಯೋ, ಕಾಮಿಸಿದ್ದನ್ನು ಕರೆಯುವ ಕಾಮಧೇನು ಯಾರ ಹೋಮಧೇನುವಾಗಿದೆಯೋ— ಅಂಥ ಇಂದ್ರನೆ ಬಂದು ಸೆರಗೊಡ್ಡಿ ಬೇಡುವಾಗ ಅವನ ಬಯಕೆಯನ್ನು ತೀರಿಸಿ ಜಗತ್ತಿನ ಕೊಡಗೈಯವರಲ್ಲೆಲ್ಲ ಮೊದಲಿನವನೆನಿಸಿಕೊಳ್ಳಬೇಕೆಂಬುದೇ ನನ್ನ ನಿಶ್ಚಯವು”— ಎಂದು ಹೇಳಿದನು.

ಹೀಗೆ ಕರ್ಣನು ತನ್ನ ಮಾತನ್ನು ನಡೆಸದೆ ಹೋದರೂ ಗುಣಕ್ಕೆ ಮತ್ಸರಿಸದ ಸೂರ್ಯನು ಬೆರಗಾಗಿ ಮುಗುಳುನಗೆಯಿಂದ ಕೂಡಿ “ಮಗು, ದಾನಮಾಡುವ ಸ್ವಭಾವದವರಿಗೆ ನೀನಾಡಿದ ಮಾತು ಒಪ್ಪುವಂಥದ್ದೆ. ನಿನ್ನ ಈ ಅಭಿಪ್ರಾಯವನ್ನು ನೋಡಿ ನಾನು ಇನ್ನೊಂದು ಮಾತನ್ನು ಹೇಳುವದು ಮಾತ್ರ ಉಳಿದಿದೆ. ಅದೇನೆಂದರೆ:— ಇಂದ್ರನ ಬಯಕೆಯನ್ನು ತೀರಿಸುವಾಗ ಅವನಲ್ಲಿ ವಜ್ರಾಯುಧಕ್ಕಿಂತ ಹೆಚ್ಚಿನ ಕೆಚ್ಚುಳ್ಳ ಶಕ್ತಿಯೆಂಬ ಆಯುಧವನ್ನಾದರೂ ಬದಲಾಗಿಪಡೆ.” ಹೀಗೆಂದು ಹೇಳಿದ ಮಾತಿಗೆ ಕರ್ಣನೂ ತಲೆ ಹಾಕಿದನು. ಒಡನೆ ಸೂರ್ಯನು ಕಾಣದಂತಾದನು. ಇದಾದ ಮೇಲೆ ಅನೇಕ ದಿನಗಳಾದವು. ಒಂದು ದಿನ ಸಭೆಯಲ್ಲಿ ಯಾಚಕರು ಕರ್ಣನನ್ನು ಬಾಯ ತುಂಬ ಹೊಗಳುತ್ತಿರುವಾಗ ಇಂದ್ರನು ಅವನ ಬಳಿಗೆ ಬಂದು ಕವಚಕುಂಡಲಗಳನ್ನು ಬೇಡಿದನು. ಇದಕ್ಕೆ ಬದಲಾಗಿ ಶಕ್ತ್ಯಾಯುಧವನ್ನು ಕೊಡುವದಕ್ಕೆ ಇಂದ್ರನೂ ಸಮ್ಮತಿಸಿದನು. ಆಗ ಕರ್ಣನು ತನ್ನ ಅವಯವವಾಗಿದ್ದ ಕವಚಕುಂಡಲಗಳನ್ನು ತನ್ನ ಕತ್ತಿಯ ಕೊನೆಯಿಂದ ತಾನೇ ಕತ್ತರಿಸಿ ಇಂದ್ರನಿಗೆ ಕೊಟ್ಟನು. ಇಂದ್ರನು ಅದನ್ನು

ತೆಗೆದುಕೊಂಡು ದೇವಸಭೆಯಲ್ಲಿ ಕರ್ಣನ ದಾನಸ್ವಭಾವವನ್ನು ಹಾಡಿ ಹರಸಿದನು.

## ಯಕ್ಷಪ್ರಶ್ನೆ

ಆಮೇಲೆ ಆ ಪಾಂಡವರು ಹಿಂದೆ ಕೈಬಿಟ್ಟುಹೋಗಿದ್ದ ಕೆಲವು ತೀರ್ಥಗಳಲ್ಲಿ ಸ್ನಾನವನ್ನು ಮಾಡಬೇಕೆಂದು ಮತ್ತೆ ದ್ವೈತವನಕ್ಕೆ ಬಂದರು. ಅಲ್ಲಿ ಅವರಿರುವಾಗ ಒಂದು ದಿನ 'ಮಹಾತ್ಮರಾದ ಪಾಂಡವರೆ, ಅಯ್ಯೋ! ಒಂದು ಜಿಂಕೆಯು ಅಗ್ನಿಯನ್ನುಂಟುಮಾಡುವದಕ್ಕಾಗಿ ಇಟ್ಟುಕೊಂಡಿದ್ದ ಅರಣಿಯನ್ನು ತೆಗೆದುಕೊಂಡು ಓಡುತ್ತಿದೆ' ಎಂದು ಒಬ್ಬ ಬ್ರಾಹ್ಮಣನು ತನ್ನ ಎಲೆಮನೆಯ ಬಾಗಿಲಿನಲ್ಲಿ ನಿಂತು ನಿರಾಶನಾಗಿ ಮೊರೆಯಿಟ್ಟನು. ಒಡನೆ ಪಾಂಡವರು ತಮ್ಮ ಬಿಲ್ಲುಗಳನ್ನು ಹಿಡಿದುಕೊಂಡು ನೇರವಾಗಿ ಹೊರಟರು. ಆ ಜಿಂಕೆಯು ಇನ್ನೇನು ಸಿಕ್ಕಿತೆಂಬಂತೆಯೂ ಇನ್ನಷ್ಟು ಮಾತ್ರವೂ ಸಿಕ್ಕದೆಂಬಂತೆಯೂ ಓಡುವದಕ್ಕೆ ಮೊದಲು ಮಾಡಿತು. ಆ ಅರಣಿಯು ಹತ್ತಿರದ ಬಳ್ಳಿಗಳಿಗೆ ತಾಕಿದಾಗ ಅದರ ಕೊಂಬುಗಳು ಅವುಗಳಿಗೆ ಸಿಕ್ಕಿಕೊಳ್ಳುತ್ತಿದ್ದವು. ಅದರೊಡನೆ ಜಿಂಕೆಯು ಬಹುದೂರ ಓಡಿ ಓಡಿ ಕೊನೆಗೆ ತಾನು ಕಾಣದಂತಾಯಿತು.

ಆ ಸಮಯದಲ್ಲಿ ಬಿಸಿಲಿನಿಂದ ಸೆಖೆಯೂ ಕಾದ ಧೂಳಿಯಿಂದ ಕಾಲೂ ಸುಡುತ್ತ ಬಂದ ಸಮಸಗಳು ಅವರಿಗೆ ಬಾಯಾರಿಕೆಯನ್ನುಂಟುಮಾಡಿತು. ತಮ್ಮಂದಿರೆಲ್ಲರೂ ಜಿಂಕೆಯನ್ನು ಹುಡುಕಿದಂತೆ ನೀರನ್ನು ಹುಡುಕುವದಕ್ಕಾರಂಭಿಸಿದರು. ಧರ್ಮರಾಯನು ಒಂದು ದೊಡ್ಡ ಮರದ ಬುಡದಲ್ಲಿ ದಣಿವಾರಿಸಿಕೊಳ್ಳುತ್ತ ಕುಳಿತುಕೊಂಡನು. ನೀರನ್ನು ತರುವದಕ್ಕೆಂದು ಹೊರಟ ತಮ್ಮಂದಿರ ದಾರಿಯಲ್ಲಿ ಕಮಲದ ಸುವಾಸನೆಯಿಂದ ಕೂಡಿದ ಗಾಳಿ ಬೀಸಿತು. ಒಡನೆ ಅವರು ಅಲ್ಲಿ ನೀರಿರುವದೆಂದು ಆ ದಾರಿಯನ್ನು ಹಿಡಿದು ಹೋದರು. ಎಷ್ಟೋ ಹೊತ್ತಾಯಿತು. ಒಬ್ಬರೂ ಹಿಂದಿರುಗಲಿಲ್ಲ. ಧರ್ಮರಾಯನ ಸಂಕಟವು ಹೆಚ್ಚಾಯಿತು. ಆಗ

ಅವನು ಅವರ ಹೆಜ್ಜೆಯ ಗುರುತುಗಳನ್ನು ಹಿಡಿದುಕೊಂಡು ಹೊರ ಟನು. ಅವನು ಅದರದೊಂದು ಕೊನೆಗೆ ಮುಟ್ಟಿದಾಗ ಅಲ್ಲೊಂದು ಕೊಳವಿತ್ತು. ಅದರ ದಡದ ಮೇಲೆ ತಮ್ಮಂದಿರೆಲ್ಲಾ ಸಾಲಾಗಿ ಬಿದ್ದಿದ್ದರು. ಅವರ ಎರಡು ಕೈಗಳಲ್ಲಿಯೂ ಕಮಲದ ಎಲೆಗಳ ದೊನ್ನೆ ಇತ್ತು. ಇದನ್ನು ನೋಡುತ್ತಲೆ ದುಃಖವು ಉಕ್ಕಿ ಮೂರ್ಛೆಬಂದು ಅವನೂ ಆ ತಮ್ಮಂದಿರ ದಾರಿಯನ್ನು ಹಿಡಿದವನಂತೆಯೇ ನೆಲದ ಮೇಲೆ ಬಿದ್ದನು. ಆ ಕಮಲದ ಹೂಗಳ ಸುವಾಸನೆಯಿಂದ ಕೂಡಿದ ಗಾಳಿಯು ಮೆಲ್ಲಮೆಲ್ಲಗೆ ಬೀಸುತ್ತಲಿ ಧರ್ಮರಾಯನು ಸ್ವಲ್ಪ ಎಚ್ಚರಗೊಂಡನು.

ಧರ್ಮರಾಯನು ಎದ್ದು ನೋಡಿದಾಗ ಅವನಿಗೆ ಹತ್ತು ದಿಕ್ಕುಗಳೂ ಶೂನ್ಯವಾಗಿ ಕಂಡವು. ಆದರೂ ಅವನು ಮೆಲ್ಲಮೆಲ್ಲಗೆ ಬಂದು ದುಃಖದ ಆವೇಶದಿಂದ ನಡುಗುತ್ತಿರುವ ತನ್ನ ಕೈಯಿಂದ ತಮ್ಮಂದಿರನ್ನು ಒಬ್ಬೊಬ್ಬರನ್ನಾಗಿ ತಡವುತ್ತ ಹಂಬಲಿಸಿದ್ದೇನೆಂದರೆ:— "ಅಯ್ಯೋ! ನೀವು ನನ್ನನ್ನು ಬಿಟ್ಟು ಪರಲೋಕಕ್ಕೆ ತೆರಳಬಹುದೇ? ದಯೆಯಿಲ್ಲದ ಆ ದೈವವು ಎಷ್ಟು ದಾರುಣವಾಗಿದೆ! ಹೆತ್ತತಾಯಿ ಗುರ್ತರಿಯದ ಈ ನಕುಲಸಹದೇವರು ಗೆಡ್ಡೆಗೆಣಸುಗಳನ್ನು ತಿಂದುಕೊಂಡು ಕಾಡಿನಲ್ಲಿ ನನ್ನೊಡನೆ ಅಲೆಯುವದನ್ನು ಆ ದೈವವು ಸಹಿಸಲಿಲ್ಲವಲ್ಲ!! ಎಲೈ ಅರ್ಜುನನೆ, ಅಂತಕಾಂತಕನೊಡನೆ ಕೂಡ ಹೋರಾಡಿದ ನಿನ್ನ ಆಯುಸ್ಸು ಈ ದಿನ ಅಂತಕನಿಗೆ ಸೂರೆಯಾಯಿತೆ? ಹಿಡಿಂಬ ಮೊದಲಾದವರನ್ನು ಹುಟ್ಟಡಗಿಸಿದ ಭೀಮಸೇನನೆ, ನೀನು ಹೀಗಾದೆಯೆಂದು ಸುದ್ದಿ ಹೊರಟರೆ ಏಕಚಕ್ರನಗರದವರೆಗೆ ಎಲ್ಲರೂ ಕಣ್ಣೀರ ಕಾಲುವೆಗಳನ್ನು ಹರಿಸುವರಲ್ಲ! ದುರ್ಯೋಧನನು ಹಿರಿಹಿರಿ ಹಿಗ್ಗುವದಕ್ಕೆ ಒಳ್ಳೆ ಸಮಯವು ಒದಗಿತು. ಅದುದಾಯಿತು. ನಾನು ಇಲ್ಲಿ ಪ್ರಾಣಗಳನ್ನು ಬಿಟ್ಟರೆ ನನ್ನ ಸುದ್ದಿಯನ್ನರಿಯದ ದ್ರೌಪದಿಯು ಕ್ರೂರಮೃಗಗಳ ಬಾಯಿಗೆ ತುತ್ತಾದಾಳು. ಅಯ್ಯೋ! ತಾಯಿಯರಾದ ಮಾದ್ರಿಕುಂತಿಯರೆ, ನಿಮ್ಮ ಮಕ್ಕಳಾದ ನಮ್ಮ ಹುಟ್ಟಿಗೂ ಸಾವಿಗೂ ಎರಡಕ್ಕೂ ಕಾಡೇ ಗತಿಯೆ? ಅರ್ಜುನನ ಗಾಂಡೀವಕ್ಕೂ ಗುರಿಯಾ

ಗದೆ ನಮ್ಮ ವಂಶವನ್ನೇ ಹಾಳುಮಾಡುವದಕ್ಕೆ ಬಂದ ಆ ಜಿಂಕೆ ಎಲ್ಲಿಗೆ ಹೋಯಿತು !"

ಹೀಗೆ ಗೋಳಾಡಿದ್ದಾದ ಮೇಲೆ ಅವರೆಲ್ಲರ ಸಾವಿಗೂ ಆ ಕೊಳದ ನೀರೇ ಕಾರಣವೆಂದು ಗೊತ್ತುಮಾಡಿಕೊಂಡು ಧರ್ಮರಾಯನು ಅದರ ರುಚಿಯನ್ನು ನೋಡುವದಕ್ಕೆಂದು ಮುಂದೆ ಬಂದನು. ಆಗ "ಎಲೈ ಅರಸೆ, ನನ್ನ ಪ್ರಶ್ನೆಗಳಿಗೆ ಉತ್ತರವನ್ನು ಕೊಡದೆ ಉಪೇಕ್ಷೆಮಾಡಿ ಬ್ರಹ್ಮನು ಕೂಡ ಇಲ್ಲಿ ನೀರನ್ನು ಕುಡಿಯಲಾರನು. ಈ ನಿನ್ನ ತಮ್ಮಂದಿರು ಸೊಕ್ಕಿನಿಂದ ನನ್ನ ಮಾತನ್ನು ಕಡೆಗಣಿಸಿ ನೀರು ಕುಡಿದು ಈ ಗತಿಯನ್ನು ಹೊಂದಿರುತ್ತಾರೆ. ಆದ್ದರಿಂದ ನನಗೆ ಉತ್ತರವನ್ನು ಹೇಳಿ ನೀರು ಕುಡಿ"— ಎಂದು ಅಂತರಿಕ್ಷದಲ್ಲಿ ನಿಂತು ಯಾರೋ ಹೇಳಿದಂತಾಯಿತು. ಆ ಯಕ್ಷನ ಪ್ರಶ್ನೆಗಳಿಗೆಲ್ಲ ಧರ್ಮರಾಯನು ಸಮಾಧಾನದಿಂದ ಉತ್ತರವನ್ನು ಕೊಟ್ಟನು. ಇದರಿಂದ ಸಂತುಷ್ಟನಾಗಿ ಆ ಯಕ್ಷರೂಪದ ಯಮನು ಕಣ್ಣಿಗೆ ಕಾಣಿಸಿಕೊಂಡನು. ಅವನು ನಾರು ಬಟ್ಟೆಯನ್ನುಟ್ಟಿದ್ದನು. ಜಟೆಯೇ ಅವನಿಗೆ ಕಿರೀಟವಾಗಿತ್ತು. ಅವನ ಕೊರಳಲ್ಲಿ ಯಜ್ಞೋಪವೀತವು ಹೊಳೆಯುತ್ತಿತ್ತು. ಹುಸಿನಗೆಯನ್ನು ನಗುತ್ತಿದ್ದ ಅವನ ಮೈಹೊಳಪು ನೂರಾರು ಹುಣ್ಣಿಮೆಗಳು ಒಮ್ಮೆಗೇ ಬಂತೆನಿಸುವಂತಿತ್ತು. ಆ ಯಮನು ತನ್ನೆದುರಿಗೆ ಕೈ ಮುಗಿದುಕೊಂಡು ನಿಂತಿದ್ದ ಧರ್ಮರಾಯನನ್ನು ನೋಡಿ ಪ್ರೇಮದಿಂದ "ಮಗು, ನಾನು ಯಮಧರ್ಮನು. ಹಗೆಗಳಿಂದ ಅನೇಕ ತೊಂದರೆಗಳಿಗೀಡಾಗಿರುವ ನಿನ್ನ ಮನಸ್ಸಿನ ತಿರುಳನ್ನರಿಯಬೇಕೆಂದು ನಾನು ಹೀಗೆ ಮಾಡಿರುವೆನು. ನಿನ್ನ ಶೀಲದಿಂದಲೂ ಉತ್ತರದಿಂದಲೂ ನಾನು ಈಗ ಪ್ರಸನ್ನನಾಗಿದ್ದೇನೆ. ನನ್ನ ಅನುಗ್ರಹದಿಂದ ನಿನ್ನ ತಮ್ಮಂದಿರೆಲ್ಲರೂ ನಿದ್ದೆಯಿಂದೆದ್ದವರಂತೆ ಏಳಲಿ. ನಿನ್ನ ಈ ಸೌಜನ್ಯಕ್ಕೆ ಫಲವಾಗಿ ಹದಿಮೂರನೆಯ ವರ್ಷದಲ್ಲಿ ಬೇರೆ ವೇಷದಲ್ಲಿರುವ ನಿಮ್ಮನ್ನು ಯಾರೂ ಗುರ್ತುಹಿಡಿಯದಿರಲಿ"— ಎಂದು ವರವನ್ನು ಕೊಟ್ಟದ್ದಲ್ಲದೆ ಬೆರಗಾಗಿ ಬಿಟ್ಟ ಕಣ್ಣಿನಿಂದ ನೋಡುತ್ತಿರುವ ಆ ತನ್ನ ಮಗನಿಗೆ ಅರಣಿಯನ್ನು ಕೊಟ್ಟು ತಾನು ಕಾಣ

ದಂತಾಪನು. ಇದರಿಂದ ಸಂತುಷ್ಟರಾಗಿ ಪಾಂಡವರೆಲ್ಲರೂ ತಮ್ಮ ಎಲೆಮನೆಗೆ ಹಿಂದಿರುಗಿದರು. ಅರಣಿಯು ಹೋಯಿತೆಂಬ ಬ್ರಾಹ್ಮಣನ ವ್ಯಸನವೂ ಕಳೆಯಿತು ; ಅವರ ವನವಾಸದ ಹನ್ನೆರಡು ವರ್ಷದ ಅವಧಿಯೂ ಕೊನೆಗಂಡಿತು.

## ವಿರಾಟನ ಆಶ್ರಯ

ಇನ್ನು ಪಾಂಡವರು ಯಾರಿಗೂ ಗುರ್ತುಸಿಕ್ಕದಂತೆ ಯಾವದಾವ ರೊಂದೂರಲ್ಲಿರಬೇಕಾದ ಕೊನೆಯ ವರ್ಷವು ಬಂತು. ಸೂರ್ಯನು ಕೊಟ್ಟ ಅಕ್ಷಯ ಪಾತ್ರೆಯ ಬಲದಿಂದ ತಾವು ಕಾಪಾಡುತ್ತಿದ್ದ ಮುನಿಜನಗಳನ್ನೆಲ್ಲ ಬಿಟ್ಟು ಪಾಂಡವರು ಆ ದ್ವೈತವನದಿಂದ ಕಾಲುತೆಗೆದರು. ದಾರಿಯಲ್ಲಿ ಅವರಿಗೊಂದು ಅಜಗರವು ಕಾಣಬಂತು. ಅದು ಸಾಮಾನ್ಯವಾಗಿ ಕಾಡುಹಾವಾಗಿರಲಿಲ್ಲ. ನಹುಷನೆಂಬ ರಾಜನು ಶಾಪದಿಂದ ಆ ಗತಿಯನ್ನು ಹೊಂದಿದ್ದನು. ನಾಲ್ಕು ಸಮುದ್ರಗಳನ್ನೂ ಒಂದು ಗುಟುಕುಮಾಡಿಕೊಂಡಂಥ ಅಗಸ್ತ್ಯಋಷಿಗಳು ತಮಗೇನೋ ಒಂದು ಆಡಬಾರದ ಮಾತನ್ನಾಡಿದ್ದಕ್ಕಾಗಿ ನಹುಷನಿಗೆ ಹಾವಾಗುವಂತೆ ಶಾಪವನ್ನು ಕೊಟ್ಟಿದ್ದರು. ಮಹಾತ್ಮರಾದ ಪಾಂಡವರ ದರ್ಶನದಿಂದ ಅವರ ಶಾಪಕ್ಕೆ ಬಿಡುಗಡೆಯಾಯಿತು. ಇದಾದ ಮೇಲೆ ಪಾಂಡವರು ಬರುತ್ತ ಬರುತ್ತ ಮತ್ಸ್ಯನಗರದ ಹತ್ತಿರದ ಸುಡುಗಾಡಿನ ದಾರಿಯಲ್ಲಿದ್ದ ಶಮೀವೃಕ್ಷದ ಬಳಿಗೆ ಸೇರಿ ತಮ್ಮ ಆಯುಧಗಳನ್ನೆಲ್ಲ ಅದರ ಮೇಲಿಟ್ಟು ಬೇರೆಬೇರೆ ವೇಷಗಳನ್ನು ಧರಿಸಿ ವಿರಾಟನ ರಾಜಧಾನಿಯೊಳಕ್ಕೆ ಕಾಲಿಟ್ಟರು.

ಧರ್ಮರಾಯನು ಸಂನ್ಯಾಸಿಯಾಗಿ ಕಂಕನೆಂಬ ಹೆಸರಿನವನಾದನು. ಹಿಂದೆ ಅರ್ಜುನನು ಕಪಟಸಂನ್ಯಾಸಿಯಾಗಿ ಸುಭದ್ರೆಯನ್ನು ವರಿಸಿದಂತೆ ಈಗ ಧರ್ಮರಾಯನು ಮತ್ತೆ ಯಾವಳನ್ನಾದರೂ ವರಿಸುವನೇನೋ ಎಂದು ದ್ರೌಪದಿಯು ಮನಸ್ಸಿನಲ್ಲಿ ಲೆಕ್ಕವನ್ನು ಹಾಕುವದಕ್ಕೆ ಅದು ದಾರಿಗೊಡುತ್ತಿತ್ತು. ತ್ರಿದಂಡ, ಕಾವಿಯ ಬಟ್ಟೆ, ಕಮಂಡಲು–

ಇವುಗಳಿಂದ ಬೆಳಗುತ್ತ, ಜಪಿಸುವಂತೆ ತುಟಿಗಳನ್ನು ಅಲ್ಲಾಡಿಸುತ್ತ ಧರ್ಮರಾಯನು ಕಾಲಿಗೆ ಮರದ ಪಾದುಕೆಗಳನ್ನು ಹಾಕಿಕೊಂಡು ವಿರಾಟನ ಸಭೆಗೆ ಬಂದನು. ವಿರಾಟನು ಆ ಸಂನ್ಯಾಸಿಯನ್ನು ನೋಡುತ್ತಲೆ ಮೇಲಕ್ಕೆದ್ದು ವಿನಯವನ್ನು ತೋರಿಸಿ ಅವನ ಪಾದಧೂಲಿಯನ್ನು ತನ್ನ ನೆತ್ತಿಯಲ್ಲಿ ಧರಿಸಿ ಅವನನ್ನೊಂದು ಪೀಠದಮೇಲೆ ಕೂಡಿಸಿದನು.

ಮಲೆತವರ ಮಾರಿಯೆನಿಸಿಕೊಂಡ ಭೀಮಸೇನನು ಕೈಯಲ್ಲಿ ಸೌಟನ್ನೂ ಒಂದು ಪಾತ್ರೆಯನ್ನೂ ಹಿಡಿದುಕೊಂಡು ಅಡಿಗೆಯವನ ವೇಷದಿಂದ ಅರಸನ ಬಳಿಗೆ ಬಂದನು. ಓಡಾಡುವ ಕುಲಪರ್ವತದ ಶಿಖರದಂತೆ ಇದ್ದ ಆ ಭೀಮನು ಅಡಿಗೆಯವನಾಗಿ ಇಡುತ್ತಿದ್ದ ಹೆಜ್ಜೆಯ ಭಾರಕ್ಕೆ ವಿರಾಟಪಟ್ಟಣದ ಭೂಮಿಯು ಮಾತ್ರವಲ್ಲದೆ ಕೀಚಕನ ಎರಡು ಭುಜಗಳೂ ನಡುಗಿದವು. ಹೀಗೆ ಅವನು ಅಡಿಗೆಯವರ ಯಜಮಾನನಾಗಿದ್ದುಕೊಂಡು ಆ ಅರಸನಿಗೆ ಬಹಳ ಬೇಕಾದವನಾಗಿ ಬಾಯಿನೀರು ಕರೆಯುವ ಪದಾರ್ಥಗಳನ್ನು ಮಾಡಿಕೊಡುವದರ ಮೂಲಕ ವಿರಾಟನ ಸೇವೆಗೆ ನಿಂತನು.

ಪೂರ್ಣವಾಗಿ ಹೆಂಗಸಿನ ರೂಪನ್ನೇ ಧರಿಸುವದು ವೀರರಿಗೆ ತಕ್ಕದ್ದಲ್ಲವೆಂದೂ ಗಂಡಸಿನ ವೇಷದಲ್ಲಿರುವದು ಅಂತಃಪುರದ ವಾಸಕ್ಕೆ ಅಡ್ಡಿಯಾಗುವದೆಂದೂ ಯೋಚಿಸಿ ಅರ್ಜುನನು ನಪುಂಸಕತ್ವವನ್ನು ವಹಿಸಿ ವಿರಾಟನ ಬಳಿಗೆ ಬಂದನು. ಕೈಯಲ್ಲಿ ತಾಳಗಳನ್ನು ಹಿಡಿದುಕೊಂಡು ಬೃಹನ್ನಳೆಯೆಂಬ ಹೆಸರನ್ನು ಇಟ್ಟುಕೊಂಡ ಅರ್ಜುನನು ಅರಸನ ರಾಣಿವಾಸದಲ್ಲಿದ್ದು ದುಂಬಿಗಳ ಝೇಂಕಾರದಿಂದ ಕೂಡಿದ ಮಲಯಮಾರುತವು ಮಲ್ಲಿಗೆ ಮೊದಲಾದ ಬಳ್ಳಿಗಳನ್ನು ಕುಣಿಸುವಂತೆ ಉತ್ತರೆ ಮೊದಲಾದ ಹುಡುಗಿಯರಿಗೆ ಕುಣಿತವನ್ನು ಕಲಿಸಿದನು.

ಬೆರಗುಗೊಳಿಸುವ ಸೌಂದರ್ಯದಿಂದ ಕೂಡಿದ ನಕುಲನು ಬಂದಾಗ ವಿರಾಟರಾಜನು ಕಣ್ಣುಮುಚ್ಚದೆ ನೋಡಿದನು. ಕೈಯಲ್ಲಿ ಚಾಟಿಯನ್ನು ಹಿಡಿದುಕೊಂಡು ಬಂದ ಅವನು ವಿರಾಟನ ಕುದುರೆಯ ಶಾಲೆಗೆ ಯಜಮಾನನಾದನು. ಕಿರಿಯವನಾದ ಸಹದೇವನು ಬಂದು ವಿರಾಟನ ಆಕಳುಗಳ ಮೇಲುವಿಚಾರಣೆಯ ಕೆಲಸದಲ್ಲಿ ನಿಂತನು.

ದ್ರೌಪದಿಯು ಆನೆಯ ಹಲ್ಲಿನ ಬಾಚಣಿಗೆಯನ್ನು ಹಿಡಿದುಕೊಂಡು ವಿರಾಟನ ಹೆಂಡತಿಯಾದ ಸುಧೇಷ್ಣೆಯ ಬಳಿಗೆ ಮಾಲಿನಿಯೆಂಬ ಹೆಸರಿನಿಂದ ಬಂದಳು. ತನ್ನ ಸೈರಂಧ್ರೀವೇಷದ ದೀನತೆಗೊಪ್ಪುವಂತೆ ಆವಳ ತಲೆಯು ಬಗ್ಗಿತ್ತು. ಹೀಗಿದ್ದರೂ ಅವಳ ರೂಪಲಾವಣ್ಯವನ್ನು ನೋಡಿ ಸುಧೇಷ್ಣೆಯು ತಾನೇ ತನ್ನ ತಲೆಯನ್ನು ಬಗ್ಗಿಸಿಕೊಂಡಳು. ಅಂತಃಪುರದ ಸ್ತ್ರೀಯರಿಗೆಲ್ಲ ತಿಲಕ ಮೊದಲಾದವನ್ನಿಟ್ಟು ಅಲಂಕರಿಸುವ ಕೆಲಸವನ್ನು ದ್ರೌಪದಿಯು ಹಿಡಿದಳು.

## ಕೀಚಕನ ಕೇಡುಗಾಲ

ಸಂನ್ಯಾಸಿಯಾಗಿದ್ದ ಧರ್ಮರಾಯನು ತನ್ನನ್ನು ಪಗಡೆಯಲ್ಲಿ ಗೆದ್ದಿದ್ದ ದುರ್ಯೋಧನ ಮೊದಲಾದವರನ್ನು ಮತ್ತೆ ಅದರಲ್ಲಿಯೇ ಗೆಲ್ಲಬೇಕೆಂದು ಅಭ್ಯಾಸಮಾಡುವವನಂತೆ ವಿರಾಟನಿಗೆ ಹೊತ್ತುಗಳೆಸುವದಕ್ಕಾಗಿ ಪಗಡೆಯಾಡುತ್ತಿದ್ದನು. ಹೊಸಬಾಗಿ ಬಂದು ಊಳಿಗಕ್ಕೆ ನಿಂತ ಈ ಗುಂಪಿನವರ ದಕ್ಷತೆಯನ್ನು ನೋಡಿ ವಿರಾಟನು ತಲೆದೂಗುತ್ತಿದ್ದನು. ಆ ಗುಟ್ಟನ್ನರಿಯದವರು ಮುಪ್ಪಿನಿಂದ ತಲೆಯಲ್ಲಾಡುತ್ತಿರುವದೆಂದು ಕೊಳ್ಳುತ್ತಿದ್ದರು. ಹೀಗೆ ಅರಸನ ಹೊಗಳಿಕೆಯು ತಮ್ಮ ಪಾಲಿಗೆ ದೊರೆಯುತ್ತ ಬಂದಹಾಗೆಲ್ಲ ಪಾಂಡವರಿಗೆ ತಮ್ಮ ವನವಾಸದ ದುಃಖದ ನೆನಪೇ ಹಾರಿಹೋಯಿತು. ಜನರಲ್ಲಿ ಯಾರಿಗೂ ಇವರ ನಿಜವಾದ ನೆಲೆ ತಿಳಿಯುವ ಹಾಗಿರಲಿಲ್ಲ.

ಹೀಗಿರುವಾಗ ಒಂದು ದಿನ ವಿರಾಟನಗರದಲ್ಲೆಲ್ಲ ಒಂದು ಹಬ್ಬವಾಯಿತು. ಆ ದಿನ ಸುಧೇಷ್ಣೆಯು ಒಂದು ಹಿರಿಯ ಮದ್ಯವನ್ನು ತರುವದಕ್ಕೆಂದು ದ್ರೌಪದಿಯನ್ನು ತನ್ನ ತಮ್ಮನಾದ ಕೀಚಕನ ಮನೆಗೆ ಕಳುಹಿಸಿದಳು. ದುಃಶಾಸನನು ತನ್ನನ್ನು ಮುಟ್ಟಿದ ಮೈಲಿಗೆಯ ಮನೋವ್ಯಥೆಯಿಂದ ಅವಳು ಈಗ ಮಾಸಿದ ಬಟ್ಟೆಯನ್ನೇ ಉಟ್ಟಿದ್ದಳು. ಅವಳು ಕೆಳಗಡೆಗೇ ನೋಡುತ್ತ ಹೊರಟಳು. ಅವಳ ಕೈಯಲ್ಲಿದ್ದ ಬೆಳ್ಳಿಯ ಪಾತ್ರೆಯು ಕಮಲವನ್ನು ಹಿಂಬಾಲಿಸಿದ್ದ ರಾಜಹಂಸದಂತಿತ್ತು.

ದ್ರೌಪದಿಯನ್ನು ನೋಡುತ್ತಲೆ ಕೀಚಕನ ಮನಸ್ಸು ಅವಳ ಸೌಂದರ್ಯ ದಲ್ಲಿ ನಟ್ಟುಹೋಯಿತು. ಒಡನೆ ಅವನು ಮಂಚದಿಂದಿಳಿದು ಅವಳ ಹತ್ತಿರಕ್ಕೆ ಬಂದು ತಲೆಯನ್ನು ಬಗ್ಗಿಸಿ–"ಹೇ ಸುಂದರಿ, ನಿನ್ನ ಮೃದು ವಾದ ಪಾದಗಳ ಮುಟ್ಟುವಿಕೆಯಿಂದ ಇಂದು ನನ್ನ ಮನೆಯು ಧನ್ಯ ವಾಯಿತು. ನಿನ್ನ ನೋಟವು ನನ್ನ ಮೇಲೆ ಬಿದ್ದದ್ದರಿಂದ ನಾನು ಕೃತಾರ್ಥನಾದೆನು. ನೀನಾಗಿ ಬಂದು ನನ್ನನ್ನು ಸಂತೋಷವೆಂಬ ಪರ್ವತದ ತುಟ್ಟತುದಿಗೆ ಏರಿಸಿದ್ದರಿಂದ ಇಂದು ನನ್ನ ಹಿಂದಿನ ಜನ್ಮಗಳ ಪುಣ್ಯವೆಲ್ಲ ಫಲವನ್ನು ಕೊಟ್ಟವೆಂದು ತಿಳಿಯುತ್ತೇನೆ. ಹೇ ಮಾಲಿನಿ, ನಿನ್ನ ತುರುಬಿನಲ್ಲಿ ಹೂವಿನ ಮಾಲೆ ಏಕೆ ಕಾಣಬರುವದಿಲ್ಲ? ಹೇ ಬಾಲೆ, ನಿನಗಾಗಿ ಸೆರಗೊಡ್ಡುತ್ತಿರುವ ನನ್ನನ್ನು ನೀನು ಕೈಹಿಡಿದು ಕಾಪಾಡು" —ಎಂದು ಬಹಳವಾಗಿ ಅಂಗಲಾಚಿ ಹೇಳಿಕೊಂಡನು.

ಸಂಪಿಗೆಯು ಗೊಂಚಲನ್ನು ತಾಕಲಾರದೆ ದುಂಬಿಗಳು ದೂರದ ಲ್ಲಿಯೇ ನಿಲ್ಲುವಂತೆ ಕೀಚಕನ ಕೆಟ್ಟ ಬಯಕೆಯ ಮಾತುಗಳು ದ್ರೌಪ ದಿಯ ನೆರಳಿನೊಳಕ್ಕೂ ಬರಲಾರದೆ ದೂರದಲ್ಲಿಯೇ ಇದ್ದವು. ಆಗ ಶುದ್ಧ ಮನಸ್ಸಿನ ದ್ರೌಪದಿಯು ಅವನನ್ನು ಕುರಿತು "ಎಲೈ ಕೀಚಕನೆ, ನೀನು ಇಷ್ಟು ದೊಡ್ಡ ಮನೆತನದವನಾಗಿದ್ದರೂ ನನ್ನಂಥ ದಾಸಿಯ ಮೇಲೆ ಕಣ್ಣುಹಾಕುವದು ಯೋಗ್ಯವಲ್ಲ. ಕಲ್ಪವೃಕ್ಷಗಳ ಹೂಗಳಲ್ಲಿ ಓಡಾಡುವ ದುಂಬಿಯು ಸುಡುಗಾಡಿನಲ್ಲಿರುವ ಮರದ ಹೂಗಳಲ್ಲಿ ಓಡಾ ಡಬೇಕೆಂದು ಬಯಸುವದೆ? ಯಾರಿಗೆ ಗಂಡನಿರುವ ಗರತಿಯರ ಮೇಲೆ ಯಾವಾಗ ಕಣ್ಣು ಬೀಳುತ್ತದೊ ಆಗಲೆ ಅವರ ಮೇಲೆ ಯಮನ ಕಣ್ಣು ಬಿತ್ತೆಂದು ತಿಳಿಯಬೇಕು. ಎಲೈ ಕೀಚಕನೆ, ನನಗೆ ಐವರು ಗಂಧರ್ವರು ಗಂಡಂದಿರಾಗಿದ್ದಾರೆ. ಅವರು ತಮ್ಮ ನಿಜಸ್ವರೂಪವನ್ನು ಮರೆಮಾಡಿ ಕೊಂಡು ಇಲ್ಲಿಯೇ ಇದ್ದು ತಮ್ಮನ್ನು ತಾವು ಕಾಪಾಡಿಕೊಳ್ಳುತ್ತಿರು ವರಲ್ಲದೆ ಹಗೆಗಳಿಗೆ ಸೂರೆಯಾಗದಂತೆ ನನ್ನನ್ನೂ ಕಾಪಾಡುತ್ತಿ ದ್ದಾರೆ. ಆದ್ದರಿಂದ ನೀನು ಈ ಅಭಿಪ್ರಾಯದಲ್ಲಿ ಮುಂದುವರಿದರೆ ಅವರು ನಿನ್ನನ್ನು ತಮ್ಮ ಕೋಪವೆಂಬ ಬೆಂಕಿಯಿಂದ ಸುಟ್ಟುಹಾಕು ವರು. ಎಚ್ಚರ!"—ಎಂದು ಹೇಳಿದಳು.

ಇಷ್ಟು ಹೇಳಿ ಅವಳು ಒಡನೆ ಕೀಚಕನನ್ನು ಬಿಟ್ಟು ಹಿಂದಿರುಗಿದಳು. ಅವಳು ಆಗ ಬೇಗಬೇಗ ಹೆಜ್ಜೆಯನ್ನಿಡುತ್ತ ಹೊರಟದ್ದರಿಂದ ಆ ಭರಕ್ಕೆ ಅವಳ ಪಾದಗಳು ಕೆಂಪೇರಿದವು. ತನ್ನ ಮಾತನ್ನು ಕಡೆಗಂಡಳೆಂದು ಕೀಚಕನ ಕಣ್ಣುಗಳೂ ಕೆಂಪೇರಿದವು. ಕೀಚಕನು ತಟ್ಟನೆ ಎದ್ದು ದ್ರೌಪದಿಯನ್ನು ಹಿಂಬಾಲಿಸಿ ಹೋಗಿ ಯಮನಂತೆ ಅವಳ ತುರುಬನ್ನು ಹಿಡಿದು ನೆಲದ ಮೇಲೆ ಕೆಡಹಿ ಕೈ ಸೋತರೆ ಕಾಲಿನಿಂದಲೂ ಕಾಲು ಸೋತರೆ ಕೈಯಿಂದಲೂ ದ್ರೌಪದಿಯನ್ನು ಹೊಡೆದನು. ಇದರಿಂದ ದ್ರೌಪದಿಯು ಎಚ್ಚರದಪ್ಪಿದಳು. ಆಮೇಲೆ ಕೀಚಕನು ತನ್ನ ದಾರಿಯನ್ನು ಹಿಡಿಯುತ್ತಲೆ ಅವಳು ಮೆಲ್ಲಗೆ ಎಚ್ಚತ್ತು ಕಣ್ಣುಬಿಟ್ಟು ಮೇಲಕ್ಕೆದ್ದಳು. ಮೈ ಎಲ್ಲ ಮಣ್ಣಾಗಿ ಅವಳ ಕಾಂತಿಯು ಮಾಸಿಹೋಗಿತ್ತು. ಆಗಿನ ಅವಳ ಸ್ಥಿತಿಯು ಹಗಲುಹೊತ್ತಿನಲ್ಲಿ ಅಡಗಿದ ಔಷಧಿಯ ಬಳ್ಳಿಯಂತೆ ಇತ್ತು. ಮುಂಗುರುಳುಗಳೆಲ್ಲ ಕೆದರಿ ಹೋಗಿದ್ದದ್ದರಿಂದ ಅವಳು ಬಿರುಗಾಳಿಯಿಂದ ಕೆದರಿದ ಕೂದಲುಳ್ಳ ಚಮರೀಮೃಗವನ್ನು ಹೋಲುತ್ತಿದ್ದಳು. ಹೀಗೆ ಅವಳು ಕಣ್ಣೀರಿಡುತ್ತ ಸುಧೇಷ್ಣೆಯ ಮನೆಗೆ ಬಂದಳು.

ಸುಧೇಷ್ಣೆಯ ಮನೆಯಲ್ಲಿದ್ದವರಿಗೆಲ್ಲ ಈ ಸುದ್ದಿ ತಿಳಿಯಿತು. ಎಲ್ಲರೂ ಕಣ್ಣೀರುಮಾತ್ರ ಹಾಕಿದರು. ಯಾರೂ ಏನೂ ಆಡಲಿಲ್ಲ. ಆ ದಿನ ರಾತ್ರೆ ದ್ರೌಪದಿಯು ಗುಟ್ಟಾಗಿ ಮೆಲ್ಲಗೆ ಭೀಮನ ಬಳಿಗೆ ಬಂದಳು. ಅವನು ದೊಡ್ಡದೊಂದು ಪಾತ್ರೆಯನ್ನೆ ತಲೆಗಿಂಬಾಗಿ ಇಟ್ಟುಕೊಂಡು ಮಲಗಿದ್ದನು. ಅವನ ಬಟ್ಟೆಯೆಲ್ಲ ಹೊಗೆಯಿಂದ ಕಪ್ಪಡರಿತ್ತು. ಅಂಥದ್ದನ್ನು ಹೊದ್ದುಕೊಂಡಿದ್ದ ಅವನು ಮೋಡದಿಂದ ಮುಸುಕಿದ ಬೆಟ್ಟದಂತೆ ಅಡಿಗೇ ಮನೆಯಲ್ಲಿ ಮಲಗಿದ್ದನು. ದ್ರೌಪದಿಯು ಹತ್ತಿರಕ್ಕೆ ಬಂದು ನಿಟ್ಟುಸಿರಿಟ್ಟು ಸುರಿಸಿದ ಕಣ್ಣೀರು ಮೈಮೇಲೆ ಬೀಳುತ್ತಲೆ ಅವನಿಗೆ ಎಚ್ಚರವಾಯಿತು. ದ್ರೌಪದಿಯನ್ನು ನೋಡಿ ಅವನು ದುಃಖದ ಕಾರಣವೇನೆಂದು ಕೇಳಿದನು. ಆಗ ಅವಳು "ಹೇ ನಾಥ, ಕೀಚಕನೆಂಬ ಕೆಡುಕನ ಕೈಗೆ ಸಿಕ್ಕಿ ಏಟುಗಳನ್ನು ತಿಂದ ನನ್ನ ದುಃಖವನ್ನೇನು ಹೇಳಲಿ! ವೀರಪತ್ನಿಯೆಂಬ ಅಭಿಮಾನವಾದರೂ ನನಗೆ ಉಳಿಯಲಿಲ್ಲವಲ್ಲ! ಕೀಚ

ಕನು ಹೊಡೆದನೆಂದು ನಾನು ಎದೆಯನ್ನು ಬಡಿದುಕೊಂಡು ಮೊರೆ ಯಿಟ್ಟರೂ ವಿರಾಟನ ಸಭೆಯಲ್ಲಿ ಧರ್ಮರಾಯನು ನಿಜವಾದ ಸಂನ್ಯಾಸಿ ಯಂತೆ ನನ್ನನ್ನು ಕಡೆಗಂಡನಲ್ಲ! ನೀನು ಆ ಧರ್ಮರಾಯನ ಸೂತ್ರದ ಬೊಂಬೆಯಾಗಿರುವದರಿಂದಲ್ಲವೆ ಕಂಡಕಂಡವರು ನನ್ನ ಮುಡಿಯನ್ನು ಹಿಡಿದೆಳೆಯುತ್ತಾರೆ. ಮೊದಲನೆಯ ಸಲ ನನ್ನ ಮೇಲೆ ಕೈಮಾಡಿದ ದುಃಶಾಸನನನ್ನು ನೀನು ತೀರಿಸಿದರೂ ಈ ಕೇಡಿಗನನ್ನು ನೀನು ಮಣ್ಣು ಮಾಡುವವರೆಗೂ ನನ್ನ ಈ ಬಿರಿದಲೆಯು ಹೀಗೆಯೇ ಇರುವದೆಂದು ತಿಳಿ. ಕೀಚಕನ ಮೇಲೆ ಕೈಮಾಡುವಷ್ಟು ಕೆಚ್ಚು ನಿನ್ನ ತೋಳಿನಲ್ಲಿಲ್ಲದಿದ್ದರೆ ನನ್ನನ್ನು ಬೇರೆ ಕಡೆಗಾದರೂ ಕರೆದುಕೊಂಡು ಹೋಗು. ಒಳ್ಳೆ ಮನೆ ತನದ ಹೆಂಗಸರು ಯಾವ ಬಗೆಯಿಂದಲಾದರೂ ತಮ್ಮ ಒಳ್ಳೆ ನಡತೆ ಯನ್ನು ಕಾಪಾಡಿಕೊಳ್ಳಬೇಕಲ್ಲವೆ?"— ಎಂದಳು.

ಹೆಂಡತಿಯು ತನ್ನಲ್ಲಿ ಹೇಡಿತನದ ಹೊರೆಯನ್ನು ಹೇರಿ ಆಡಿದ ಮಾತನ್ನು ಕೇಳುತ್ತಲೆ ಮೊದಲೇ ಸಿಟ್ಟಿನಿಂದಾಗಿದ್ದ ಕಣ್ಣಿನ ಕೆಂಪು ಇಮ್ಮಡಿಯಾಯಿತು. ಆಗ ಅವನು ತುಟಿಗಳನ್ನು ನಡುಗಿಸುತ್ತ "ಹೇ ಪ್ರಿಯೆ, ಹಿಡಿಂಬ, ಕಿರ್ಮೀರ, ಜರಾಸಂಧ, ಬಕಾಸುರ ಮೊದಲಾದ ವರನ್ನೆಲ್ಲ ಮುರಿದು ಮೂಲೆಗೊಗೆದ ಮಹಾವೀರಾಧಿವೀರನ ಮುಂದೆ ಕೀಚಕನೆಷ್ಟರವನು? ಈ ನನ್ನ ಭಾರವಾದ ಗದೆಯೊಂದು ಕಡೆ ಇರಲಿ. ನಾನು ತೋಳನ್ನು ಚಪ್ಪರಿಸಿಕೊಂಡು ಜಟ್ಟಿಯ ಕಾಳಗಕ್ಕೆ ನಿಂತೆನೆಂದರೆ ಇಂದ್ರನೆಲ್ಲಿಯೊ! ಬ್ರಹ್ಮನೆಲ್ಲಿಯೊ! ವಿಷ್ಣುವೆಲ್ಲಿಯೊ! ಈಶ್ವರನೆಲ್ಲಿಯೊ! ಇಂಥ ನಾನು ಕೀಚಕನನ್ನು ಎದುರಾಳಿಂದು ತಿಳಿಯುವದಕ್ಕೇ ನಾಚಿ ಕೆಯಾಗುತ್ತದೆ. ಆದರೂ ಈ ಸಮಯದಲ್ಲಿ ನಾನು ಅವನನ್ನು ಉಪೇಕ್ಷೆ ಮಾಡುವ ಹಾಗಿಲ್ಲ ಕುಲಸ್ತ್ರೀಗೆ ಕೆಡಕು ಬಗೆಯುವವನನ್ನು ತುಳಿದು ತೂರುವದು ಮೊದಲನೆಯ ಕೆಲಸ. ಹೇ ಪ್ರಾಣಸಖಿ, ನನ್ನ ವೀರ ಲಕ್ಷ್ಮಿಯ ಪಾದಕ್ಕೆ ಅವನ ರಕ್ತವನ್ನು ಅರಗಿನ ರಸವನ್ನಾಗಿ ಮಾಡು ತ್ತೇನೆ. ಅವಳ ಮೈಗೆ ಆವನ ಮೂಳೆಗಳ ಪುಡಿಗಳೆಂಬ ಕರ್ಪೂರದ ಧೂಳಿ ಯನ್ನೆರಚುತ್ತೇನೆ. ಇದನ್ನು ನೀನು ಕಣ್ಣಾರೆ ನೋಡು. ನೀನು ಅಂತಃ ಪುರದ ಸ್ತ್ರೀಯರಿಗೆ ಅಲಂಕಾರವನ್ನು ಮಾಡುತ್ತಿರುತ್ತೀಯಷ್ಟೆ. ಈಗ

ನಾನೂ ನಿನ್ನ ಮೇಲುಪಙ್ಕ್ತಿಯನ್ನು ಅನುಸರಿಸುವೆನು. ಇನ್ನು ನೀನು ಅವನನ್ನು ಕಂಡಾಗ ನೀನಾಗಿ ಅವನಿಗೆ ಒಲಿದವಳಂತೆ ತೋರಿಸಿಕೊಂಡು ಬೆಡಗನ್ನು ಬೀರಿ ಹುಸಿನಗೆಯನ್ನು ನಕ್ಕು ಏಕಾಂತದಲ್ಲಿ ಸೇರುವದಕ್ಕೆ ಕುಣಿತದ ಮನೆಗೆ ಬರುವಂತೆ ಮಾಡು"—ಎಂದು ಹೇಳಿದನು.

ಈ ಮಾತನ್ನು ಕೇಳುತ್ತಲೆ ದ್ರೌಪದಿಗೆ ಸಮಾಧಾನವಾಯಿತು. ಒಡನೆ ದ್ರೌಪದಿಯ ಹೆದರಿಕೆಯೂ ಹಿಮ್ಮೆಟ್ಟಿತು; ಇರುಳೂ ಹಿಮ್ಮೆಟ್ಟಿತು. ಆಮೇಲೆ ಮತ್ತೊಂದು ದಿನ ಕೀಚಕನು ದ್ರೌಪದಿಯ ಬಳಿಗೆ ಬಂದು "ಹೇ ಸುಂದರಿ, ನನ್ನ ಮೇಲೆ ಪ್ರಸನ್ನಳಾಗು. ಪ್ರೇಮಕಲಹದಿಂದ ನನ್ನ ಮುಡಿಯನ್ನೂ ಹಿಡಿದು ಒದೆತವನ್ನೂ ಕೊಟ್ಟು ಮೊನ್ನೆ ನಾನು ಮಾಡಿದ್ದಕ್ಕೆ ಮುಯ್ಯಿ ತೀರಿಸಿಕೊ. ನಿನ್ನ ಐವರು ಗಂಡಂದಿರ ಮಾತಿರಲಿ. ನಾನಿರುವಾಗ ನೀನು ಅವರಿಗೆ ಹೆದರಬೇಕಾದದ್ದಿಲ್ಲ. ಕಾಡಿನಲ್ಲಿ ಸಿಂಹವನ್ನು ನೋಡಿದರೆ ಉಳಿದ ಮೃಗಗಳು ಎದುರಿಗೆ ನಿಲ್ಲಬಲ್ಲವೆ? ಮಾನಿನಿ, ನನ್ನ ಬಯಕೆಯನ್ನು ತೀರಿಸು"—ಎಂದು ಕೈಜೋಡಿಸಿ ಬೇಡಿಕೊಂಡನು.

ಹೀಗೆ ಮಾನಗೆಟ್ಟು ಹರಟುತ್ತಿರುವ ಅವನನ್ನು ನೋಡುತ್ತಲೆ ಅವಳ ಮುಖವು ಅಸಹ್ಯದಿಂದ ಓರೆಯಾದರೂ ಅದಕ್ಕೆ ನಾಚಿಕೆಯ ಬಣ್ಣವನ್ನು ಕೊಟ್ಟು ತಾನೂ ಅವನನ್ನು ಬಯಸಿದವಳಂತೆ ನಟಿಸಿ "ಎಲೈ ವೀರನೆ, ಇಂಥ ಸಂದರ್ಭದಲ್ಲಿ ತಮ್ಮ ಮನಸ್ಸಿನ ಒಲವನ್ನು ತೋರಿಸಲು ಸ್ವಭಾವವಾಗಿ ಹೆಂಗಸರಿಗೆ ನಾಚಿಕೆಯೆಂಬ ಪರದೆಯು ಅಡ್ಡಬರುವದರಿಂದ ತಡವಾಗುತ್ತವೆ. ಇದರ ಜೊತೆಗೆ ನನಗೆ ಗಂಧರ್ವರ ಹೆದರಿಕೆಯೊಂದು ಬಾಧಿಸುತ್ತಿತ್ತು. ನಿನ್ನ ಮಾತು ಅದನ್ನೂ ಕಳೆಯಿತು. ಆದ್ದರಿಂದ ಈ ಇರುಳು ಕುಣಿತದ ಮನೆಗೆ ಬಂದುಬಿಡು. ಮತ್ತೆ ನೀನು ಅಂತಃಪುರದ ಹೆಂಗಸರ ಮುಖವನ್ನು ನೋಡದಂತೆ ನಾನು ಮಾಡುತ್ತೇನೆ"—ಎಂದು ಸೂಚಿಸಿದಳು.

ದ್ರೌಪದಿಯ ಮಾತುಗಳೆಂಬ ಅಮೃತದ ಸೋನೆಯನ್ನು ಕೀಚಕನ ಕಿವಿಗಳೆಂಬ ಪಾತ್ರೆಗಳು ಬಾಯನ್ನಗಲಿಸಿಕೊಂಡು ಚೆನ್ನಾಗಿ ಹಿಡಿದುಕೊಂಡವು. ಆಗ ಅವನು ಆನಂದವೆಂಬ ಸಮುದ್ರದಲ್ಲಿ ಓಲಾಡುತ್ತ

ಮನೆಗೆ ಬಂದು ಮಿಂದು ಮಡಿಯುಟ್ಟು ಸುಗಂಧವನ್ನು ಪೂಸಿ ಹೂ ಮುಡಿದು ಸರ್ವಾಲಂಕಾರಯುಕ್ತನಾಗಿ ಸಿದ್ಧನಾದನು. ಸೂರ್ಯನು ಪಡುವಲ ಕಡಲಿನಲ್ಲಿ ಮುಳುಗಿದನು. ಕತ್ತಲೆಯು ಆಕಾಶದಲ್ಲೆಲ್ಲ ತುಂಬಿತು. ಕೀಚಕನು ಕುಣಿತದ ಮನೆಗೆ ಬರುವ ಹೊತ್ತಿಗೆ ಮುಂಚೆಯೇ ಭೀಮನೂ ತನ್ನ ಅಡಿಗೆಯ ಮನೆಯ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಅಲ್ಲಿಗೆ ಬಂದು ಸೇರಿದ್ದನು.

"ಎಲ್ಲೈ ಮಾಲಿನಿ, ಬಣ್ಣದ ಬೊಂಬೆಯಂತಿರುವ ನೀನೆಲ್ಲಿರುವೆ?" ಎಂದು ಹೇಳುತ್ತ ಕೀಚಕನು ಮೆಲ್ಲಗೆ ಭೀಮನ ಹಾಸಿಗೆಯ ಬಳಿಗೆ ಬಂದನು. ಆಗ ಭೀಮನು ಹೆಂಗಸರ ದನಿಯಿಂದ ಅವನನ್ನು ಕುರಿತು "ನನ್ನನ್ನು ಬಯಸಿ ನೂರಾರು ಹೆಂಡಿರನ್ನು ಬಿಟ್ಟು ಇಲ್ಲಿಗೆ ಬಂದಿರುವೆಯಾದ ಕಾರಣ ನೀನು ಈಗ ಬಹಿಃಪ್ರಾಣನಾಗಿ ಕಾಣುತ್ತಿ" ಎಂದು ನುಡಿದನು. ಆ ಮಾತಿನ ಹೂರಣದ ಅರ್ಥವನ್ನು ಅರಿಯದೆ ಕೀಚಕನು ಮತ್ತೆ ವಿನಯದಿಂದ ಕೂಡಿ "ಹೇ ಮಂಗಲಾಂಗಿ, ಪ್ರಾಣಪ್ರಿಯರಾದ ಗಂಧರ್ವರೈವರನ್ನೂ ಹುಲ್ಲಿನಂತೆ ಕಡೆಗಂಡು ನೀನು ಮನುಷ್ಯನಾದ ನನಗೆ ಒಲಿದಿರುವೆಯಾದ ಕಾರಣ ನನ್ನ ಮನುಷ್ಯತ್ವವು ದೇವತ್ವಕ್ಕಿಂತ ಹಿರಿದಾಯಿತೆಂದು ತಿಳಿಯುತ್ತೇನೆ"– ಎಂದು ಹೇಳುತ್ತ ಮಂಚವನ್ನು ಹತ್ತುವದಕ್ಕಾಗಿ ಸ್ವಲ್ಪ ಬಗ್ಗುವದರೊಳಗೇ ಬ್ರಹ್ಮನು ಕೀಚಕನಿಗೆ ಕೊಟ್ಟ ಆಯುಷ್ಯದ ಬರೆಹವನ್ನು ಅಳಿಸುವವನಂತೆ ಭೀಮನು ತನ್ನ ಬಿರಿಮುಷ್ಟಿಯಿಂದ ಅವನ ಹಣೆಯಮೇಲೆ ಮುಟ್ಟಿದನು. ಆಗ ಅವನೊಬ್ಬ ಗಂಧರ್ವನಿರಬಹುದೆಂದು ಕೀಚಕನಿಗೆ ತೋರಿತು. ತನಗೆ ಬಂದ ಹೊಡೆತದ ಸಂಚಕಾರವನ್ನು ತಿರುಗಿ ಮುಟ್ಟಿಸಬೇಕೆಂದು ಕೀಚಕನು ತನ್ನ ಸಿದ್ಧತೆಯನ್ನು ನಡೆಸಿದನು. ಇಬ್ಬರಿಗೂ ಕೈಕೈ ಹತ್ತಿತು. ಇಬ್ಬರೂ ಬಲಶಾಲಿಗಳು; ಇಬ್ಬರೂ ಒಬ್ಬರನ್ನೊಬ್ಬರು ಗೆಲ್ಲಬೇಕೆನ್ನುವವರು; ಇಬ್ಬರೂ ಸಿಟ್ಟುಗೊಂಡವರು. ಈ ಇಬ್ಬರೂ ಒಬ್ಬರನ್ನೊಬ್ಬರು ಜರಿದಾಡುತ್ತ ಆಯಾಸವನ್ನು ಲೆಕ್ಕಕ್ಕೆ ತರದೆ ಒಬ್ಬೊಬ್ಬರೊಮ್ಮೊಮ್ಮೆ ರಕ್ತವನ್ನು ಕಕ್ಕುವಷ್ಟು ಹೊಡೆತಗಳನ್ನು ಪ್ರಯೋಗಿಸುತ್ತ ಕಠೋರವಾದ ಕದನವನ್ನು ಮಾಡಿದರು. ಆ ಭೀಮಕೀಚಕರ ರಣಾಂಗದಲ್ಲಿ ನೋಟ

ಕರ ಹೊಗಳಿಕೆ ಇಲ್ಲ; ಬುಸುಗುಟ್ಟುವಿಕೆ ಇಲ್ಲ. ಕೊನೆಗೆ ಭೀಮನ ಹೊಡೆತದಿಂದ ಕೀಚಕನು ನೆಲಾಹಿಡಿದನು. ಆ ಕುಣಿತದ ಮನೆಯು ತನ್ನಲ್ಲಿ ಅರ್ಜುನನಿಂದ ಕಲಿತ ಉತ್ತರೆ ಮೊದಲಾದ ಕನ್ನಿಕೆಯರ ಕುಣಿತ ವನ್ನು ಅಣಕಿಸುವದೆಂಬಂತೆ ಭೀಮಕೀಚಕರ ರಣವೀರನಾಟ್ಯದಿಂದ ನಡುಗಿತು.

ಕುಣಿತದ ಮನೆಯಲ್ಲಿ ಉಂಡೆಯಾಗಿ ಬಿದ್ದಿದ್ದ ಕೀಚಕನ ಮಾಂಸ ವನ್ನು ನೋಡಿ ದ್ರೌಪದಿಯು ಆನಂದದಿಂದ ಭೀಮನ ಭುಜಗಳಿಗೊಂದು ಮುತ್ತುಕೊಟ್ಟಳು. ಒಡನೆ ಭೀಮನು ಅಲ್ಲಿಂದ ಹೊರಬಿದ್ದು ಅಡಿಗೆಯ ಮನೆಯನ್ನು ಸೇರಿ ಏನೂ ಅರಿಯದವನಂತೆ ಹಾಯಾಗಿ ಮಲಗಿಕೊಂಡನು. ಇತ್ತ ದ್ರೌಪದಿಯು ಸತ್ತು ಮುದ್ದೆಯಾಗಿ ಬಿದ್ದಿದ್ದ ಕೀಚಕನನ್ನು ನೋಡಿ ಗಾಬರಿಗೊಂಡವಳಂತೆ ಗಟ್ಟಿಯಾಗಿ ಕಿರಿಚಿಕೊಂಡಳು. ಆ ಸದ್ದ ನ್ನು ಕೇಳಿ 'ಏನು ! ಏನು !' ಎಂದುಕೊಳ್ಳುತ್ತ ಕೀಚಕನ ತಮ್ಮಂದಿರು ಬಂದು ನೋಡಿದಾಗ ಕೀಚಕನು ಮೃತ್ಯುವಿನ ಕವಳವಾಗಿ ಮಾಡಿದ ಒಂದು ತುತ್ತಾಗಿದ್ದನು. ಇದನ್ನು ನೋಡಿ ಅವರೆಲ್ಲರೂ ದುಃಖದಿಂದ ಕಣ್ಣೀರ ಕಾಲುವೆಯನ್ನು ಹರಿಸಿದರು. ಆಮೇಲೆ ಅವರು ಆವನ ಮರಣಕ್ಕೆ ಇವಳೇ ಕಾರಣಳೆಂದು ಅವಳನ್ನು ಅವನ ಚಟ್ಟದ ಕೋಲಿಗೆ ಬಿಗಿದು ಅವರಿಬ್ಬ ರನ್ನೂ ಹೊತ್ತು ಆ ಕಾರಿರುಳಲ್ಲಿ ಪಂಜುಗಳನ್ನು ಹಿಡಿದುಕೊಂಡು ಸುಡುಗಾಡಿಗೆ ಬಂದರು.

ಈ ಸ್ಥಿತಿಯಲ್ಲಿ ದ್ರೌಪದಿಯು ಕಲ್ಲು ಕೂಡ ಕರಗುವಂತೆ ತನ್ನ ಸ್ವಾಮಿಗೆ ಮೊರೆಯಿಟ್ಟಳು. ಆ ಸದ್ದು ಕಿವಿಗೆ ಬೀಳುತ್ತಲೆ ಭೀಮನು ಎದ್ದು ಭರದಿಂದ ಓಡಿ ಬಂದು ಆ ಉಪಕೀಚಕರನ್ನೆಲ್ಲ ಅವರ ಅಣ್ಣನ ಹಿಂದೆ ಹೋಗತಕ್ಕವರನ್ನಾಗಿ ಮಾಡಿದನು. ಈ ಬಗೆಯ ಭೀಮನ ಆರ್ಭಟನನ್ನು ನೋಡಿ ಜನರೆಲ್ಲರೂ ಎಡಗೈಯಲ್ಲಿ ಜೀವವನ್ನು ಹಿಡಿದುಕೊಂಡು ತಲೆಯನ್ನು ಮರೆಮಾಡಿಕೊಂಡರು. ಆಮೇಲೆ ಭೀಮನು ಚಿತಿಯ ಕಟ್ಟನ್ನು ಕಳಚಿದನು. ಆಗ ದ್ರೌಪದಿಯು ಬಿಡು ಗಡೆಯನ್ನು ಹೊಂದಿ ಅವನ ಜೊತೆಯಲ್ಲಿಯೇ ಊರಿಗೆ ಹಿಂದಿರುಗಿ ತನ್ನ ಸ್ಥಲವನ್ನು ಸೇರಿದಳು.

ಮರುದಿನ ಹೊತ್ತು ಹುಟ್ಟಿತು. ಆಗ ಎಲ್ಲೆಲ್ಲಿಯೂ ಹರಡಿದ ಕೆಂಬೆಳಗು ಮಾಂಸದ ಮುದ್ದೆಯಿಂದ ಕೂಡಿದ ಆ ಕುಣಿತದ ಮನೆಯ ರಕ್ತದ ಸಾರಣೆಯನ್ನು ಜನರಿಗೆ ತೋರಿಸುವಂತಿತ್ತು. ಕುಣಿತದ ಮನೆಯ ಸುದ್ದಿಯನ್ನು ಕೇಳಿ ಊರ ಜನರೆಲ್ಲರೂ ಅಮಂಗಲವನ್ನು ಸೂಚಿಸುವಂತೆ ಬೋಡತಲೆಗಳಲ್ಲಿ ಅರಮನೆಯ ಮುಂದೆ ಬಂದು ನೆರೆದರು. ತಮ್ಮ ಮನೋವ್ಯಥೆಯನ್ನು ಸೂಚಿಸುವದಕ್ಕಾಗಿ ಅವರು ಮೌನವನ್ನು ವಹಿಸಿದ್ದರು. ನಡೆದ ಸಂಗತಿಯೆಲ್ಲ ತಿಳಿದರೂ ಯಾರೂ ದ್ರೌಪದಿಯ ವಿಷಯದಲ್ಲಿ ತುಟಿಯನ್ನು ಅಲ್ಲಾಡಿಸಲಿಲ್ಲ. ಕೀಚಕನ ಕೊಲೆಯಾದ ಆ ದಿನ ದ್ರೌಪದಿ ತನ್ನ ಬಳಿಗೆ ಬರುತ್ತಲೆ ಸುಧೇಷ್ಣೆಯ ಕಣ್ಣುಗಳಿಂದಲೂ ಪಳಪಳ ಕಣ್ಣೀರಿನ ಹನಿಗಳುದುರಿದವು.

## ತೆಂಕಲಲ್ಲಿ ಆಕಳುಗಳನ್ನು ಹಿಡಿದದ್ದು

ಕೀಚಕನ ಸಾವಿನ ಸುದ್ದಿ ಗೂಢಚಾರರಿಂದ ದುರ್ಯೋಧನನವರೆಗೆ ಹರಿಯಿತು. ಇದರಿಂದ ಪಾಂಡವರು ಅಲ್ಲಿರಬೇಕೆಂದು ಊಹಿಸಿ ದುರ್ಯೋಧನನು ಶಕುನಿ ಮೊದಲಾದವರ ಸಭೆಯನ್ನು ಸೇರಿಸಿ ವಿರಾಟನಗರದ ಸುದ್ದಿಯನ್ನೆಲ್ಲ ಹೇಳಿದ್ದಲ್ಲದೆ “ ನಾಲ್ಕು ಮಾರ್ಗಗಳು ಸೇರುವ ಕಡೆಯ ಮಂಟಪದ ಗೊಂಬೆಯಂತೆ ಎಲ್ಲರ ಕಣ್ಣಿಗೂ ಬೀಳತಕ್ಕವಳು ಆ ದ್ರೌಪದಿಯೇ ಆಗಿರಬೇಕು. ಅವಳು ಹೇಳುವ ಗಂಧರ್ವರೈವರು ಪಾಂಡವರೇ ಆಗಿರಬೇಕು- ಹೆಂಡತಿಯನ್ನು ಕೆಣಕಿದವನನ್ನು ಕೊಂದನು ಭೀಮನೇ ಆಗಿರಬೇಕು. ಪಾಂಡವರು ತಮ್ಮ ದೇಶದಲ್ಲಿಯೇ ಇರಲಿ, ಮತ್ತೊಬ್ಬರ ದೇಶದಲ್ಲಿಯೇ ಇರಲಿ- ಇತರರಿಗೆ ಕೇಡನ್ನು ಬಗೆಯುವ ಇವರ ದುಷ್ಟಸ್ವಭಾವಕ್ಕೆ ತಡೆಯೇ ಇಲ್ಲ. ತಮ್ಮ ದೇಶದಲ್ಲಿಯೇ ಅವರು ಜರಾಸಂಧ ಮೊದಲಾದವರೊಡನೆ ಹಗೆತನವನ್ನು ಸಾಧಿಸಿದರು. ಕಾಡಿನಲ್ಲಿ ಕಿರ್ಮೀರ, ಹಿಡಿಂಬ- ಮೊದಲಾದವರ ಮೇಲೆ ವಿಷವನ್ನು ಕಕ್ಕಿದರು. ಯಾರೊಡನೆಯೂ ಜಗಳವಿಲ್ಲದೆ ಅವರು ಇದ್ದ

ದ್ದಾದರೂ ಎಲ್ಲಿ? ಈಗ ಪಾಂಡವರು ತಮ್ಮ ರೂಪನ್ನು ಮರೆಸಿ ಕೊಂಡು ವಿರಾಟನಿಗೆ ಮಂಕುಬೂದಿಯನ್ನೆರಚಿದ್ದಾರೆ"- ಎಂದು ವಿವರಿ ಸುತ್ತ ಕರ್ಣನ ಕೈ ಮೇಲೆ ಕೈ ಹಾಕಿ ಗಟ್ಟಿಯಾಗಿ ನಕ್ಕನು.

ಮುಂದೇನು ಮಾಡಬೇಕೆಂದು ಒಳಸಂಚು ನಡೆಯಿತು. ವಿರಾಟ ನಗರವನ್ನು ಮುತ್ತಿದರೆ ಪಾಂಡವರು ತಾವಾಗಿಯೇ ಹೊರಬಿದ್ದು ಕಾಣಿಸಿಕೊಳ್ಳುವರೆಂದೂ ಆಗ ಅವರನ್ನು ಗುರ್ತುಹಿಡಿದು ಮತ್ತೆ ಕಾಡಿಗೆ ಅಟ್ಟಬಹುದೆಂದೂ ಯೋಚಿಸಿ ದುರ್ಯೋಧನನು ತ್ರಿಗರ್ತಾಧಿ ಪತಿಯಾದ ಸುಶರ್ಮನನ್ನು ಕರೆದು ಆಕಳುಗಳನ್ನು ಸೆರೆಹಿಡಿಯಹೇಳಿ ವಿರಾಟನಗರಕ್ಕೆ ಹೊರಡಿಸಿದನು. ಸೂರ್ಯನು ಪಶ್ಚಿಮಸಮುದ್ರದ ಬಳಿಗೆ ಬರುವ ಹೊತ್ತಿಗೆ ಸರಿಯಾಗಿ ಸುಶರ್ಮನು ವಿರಾಟನಗರದ ಬಳಿಗೆ ಬಂದನು. ಬಾಲಗಳನ್ನು ಎತ್ತಿಕೊಂಡು ಹೂಂಕಾರಮಾಡುತ್ತ ಕುತ್ತಿ ಗೆಯ ಗಂಟೆಗಳನ್ನು ಗಣಗಣಗುಟ್ಟಿಸುತ್ತಿರುವ ಆಕಳ ಹಿಂಡನ್ನು ಹಿಡಿಯುವದಕ್ಕೆ ಸುಶರ್ಮನ ಸೇನೆಯು ದಕ್ಷಿಣಭಾಗವನ್ನು ಮುತ್ತಿತು. ಈ ಸುದ್ದಿಯನ್ನು ಕೇಳಿ ವಿರಾಟನೂ ಯುದ್ಧಸನ್ನಾಹವನ್ನು ಮಾಡಿ ದನು. ಅವನ ಸೇನೆಯ ಆನೆಗಳ ಘೀಂಕಾರಗಳು ಅರಮನೆಯ ಶಿಖರ ದಲ್ಲಿರುವ ಕೃತ್ರಿಮಸಿಂಹಗಳ ಬಾಯಿಯೆಂಬ ಗುಹೆಗಳಲ್ಲಿ ಪ್ರತಿಧ್ವನಿಯ ನ್ನುಂಟುಮಾಡಿದವು. ಅನುಕೂಲವಾಗಿ ಬೀಸಿದ ಗಾಳಿಯಿಂದ ವಿರಾ ಟನ ಧ್ವಜಪಟವು ಮುಮ್ಮುಖವಾಯಿತು.

ಅಡಿಗೆಯವರೂ ಕುದುರೆಯವರೂ ದನಾಕಾಯುವವರೂ ಹೊಗ ಳುತ್ತಿರಲು ವಿರಾಟನು ಯುಧಿಷ್ಠಿರಭೀಮನಕುಲಸಹದೇವರನ್ನು ಮುಂದು ಮಾಡಿಕೊಂಡು ಹಗೆಗಳಿಗೆ ಇದಿರಾದನು. ತಮ್ಮ ಒಡೆಯನಾದ ಸಹದೇವನ ಮುಖವನ್ನು ಕಂಡ ಮಾತ್ರದಿಂದಲೆ ಆಕಳುಗಳ ಹಿಂಡು ಸುಶರ್ಮನ ದಂಡನ್ನು ಹುಲ್ಲಿಗಿಂತ ಕಡೆಯಾಗಿ ಕಂಡು ವಿರಾಟನ ಕಡೆಗೆ ಓಡಿ ಬಂದಿತು. ಆದರೂ ಎರಡು ದಂಡಿನವರೂ ಯುದ್ಧಾರಂಭ ವನ್ನು ಸೂಚಿಸಿ ಶಂಖವನ್ನೂದಿದರು. ಓಂಕಾರವನ್ನುಚ್ಚರಿಸಿದ ಮೇಲೆ ವೇದಾಧ್ಯಯನವು ನಡೆಯುವಂತೆ ಶಂಖಧ್ವನಿಯಾದ ಮೇಲೆ ಯುದ್ಧ

ಪ್ರಸಂಗವು ನಡೆಯಿತು. ಭೀಮನ ಸಿಂಹನಾದದಿಂದ ಹಗೆಗಳಿಗೆ ಮಾತ್ರವೇ ಅಲ್ಲದೆ ಹತ್ತು ದಿಕ್ಕುಗಳೂ ಗಡಗುಟ್ಟಿದವು. ಸ್ವಲ್ಪ ಹೊತ್ತಿನಲ್ಲಿಯೇ ಭೀಮ ಮೊದಲಾದವರ ಕೈಮೆಯಿಂದ ಆನೆಗಳು ಕುದುರೆಗಳು ರಥಿಗಳು, ಕಾಲಾಳುಗಳು– ಇವರ ಬಿಸಿಬಿಸಿಯಾದ ರಕ್ತದಿಂದ ಭೂಮಿಯೆಲ್ಲ ಕೆಸರಾಗಿ ಹೋಯಿತು. ಅದನ್ನು ನೋಡಿ ಕೋಪಗೊಂಡು ಸುಶರ್ಮನು ವಿರಾಟನನ್ನೇ ಸೆರೆಹಿಡಿಯುವ ಸಂಚುಮಾಡಿ ಅವನನ್ನು ಹಿಡಿದು ಕಟ್ಟಿದನು. ಇದನ್ನು ಕಂಡ ಕಂಕನು ಹುಬ್ಬನ್ನು ಹಾರಿಸುತ್ತಲೆ ಭೀಮನು ಬಂದು ಕಾಣಿಸಿಕೊಂಡು ವಿರಾಟನ ಕಟ್ಟನ್ನು ಬಿಚ್ಚಿ ಅದೇ ಕಟ್ಟನ್ನೇ ಸುಶರ್ಮನಿಗೆ ಬಿಗಿದನು. ಆದರೆ ಧರ್ಮರಾಯನ ದಯೆಯಿಂದ ಅವನಿಗೆ ಜೀವಭಿಕ್ಷೆ ದೊರೆಯಿತು. ಸುಶರ್ಮನು ಮುಖಕ್ಕೆ ಮುಸುಕುಹಾಕಿಕೊಂಡು ನಡುರಾತ್ರಿಯಲ್ಲಿಯೇ ತಾನು ಬಂದ ದಾರಿಯನ್ನು ಹಿಡಿದನು. ಆಕಳ ಹಿಂಡು ವಿರಾಟನ ನಗರಕ್ಕೆ ಹಿಂದಿರುಗಿ ಬರುತ್ತ ಆನಂದದಿಂದ ಸುರಿಸಿದ ಹಾಲ ಕಾಲುವೆಯು ದಾರಿಯಲ್ಲಿದ್ದ ಮರಗಳಿಗೆ ತಣ್ಣನ್ನುಂಟುಮಾಡಿತು.

## ಅರ್ಜುನನು ಉತ್ತರನಿಗೆ ಸಾರಥಿಯಾದದ್ದು

ತೆಂಕಲಲ್ಲಿ ಆಕಳ ಹಿಂಡನ್ನು ಹಿಡಿದ ಹಾಡು ಮುಗಿಯಿತು. ಇನ್ನು ದುರ್ಯೋಧನನು ತಾನೆ ಬಡಗಲಲ್ಲಿ ಕಾಣಿಸಿಕೊಂಡನು. ಅವನ ಸೇನೆಯು ತುಪ್ಪ ಮೊದಲಾದವುಗಳ ವಾಸನೆಯನ್ನು ತೆಗೆದುಕೊಳ್ಳುತ್ತ ಗೊಲ್ಲರ ಹಟ್ಟಿಯ ಹತ್ತಿರ ನಿಂತಿತು. ಆಗ ಕೆಲವರು ಹಟ್ಟಿಯೊಳಕ್ಕೆ ನುಗ್ಗಿ ಕೊಟ್ಟಿಗೆಯಲ್ಲಿದ್ದ ಆಕಳುಗಳನ್ನೆಲ್ಲ ಹಿಡಿದರು. ಅಷ್ಟು ಹೊತ್ತಿಗೆ ಅವುಗಳ ಹಾಲನ್ನು ಹಿಂಡಿಕೊಳ್ಳುವ ಕೆಲಸವು ಅರ್ಧ ಮಾತ್ರ ಆಗಿದ್ದದ್ದರಿಂದ ಅವು ಅಲ್ಲಿಂದ ಹೊರಬಿದ್ದಾಗ ಅವುಗಳ ಕೆಚ್ಚಲು ಇನ್ನೂ ಅರ್ಧ ತುಂಬಿಯೇ ಇತ್ತು. ತೆಂಕಲ ಕಡೆ ಭೀಮಸೇನನಿಂದ ಚಿಕಿತ್ಸೆಯನ್ನು ಹೊಂದಿದ ಕೌರವರ ಬಾಧೆಯು ಈಗ ಪಾರ್ಶ್ವವಾಯುವಿನಂತೆ ಬಡಗಲ ಕಡೆ ಎದ್ದುಕೊಂಡಿತು.

ಈ ಸುದ್ದಿಯನ್ನು ತಿಳಿಸುವದಕ್ಕಾಗಿ ಒಬ್ಬ ಗೊಲ್ಲರ ಹುಡುಗನು ಹಟ್ಟಿಯಲ್ಲಿ ತಟ್ಟಾಡುವ ಆಕಳಿನಂತೆ ಅತ್ತಿತ್ತ ನೋಡುತ್ತ ಗಾಬರಿಗೊಂಡು ವಿರಾಟನ ಮಗನಾದ ಉತ್ತರನ ಸಭೆಗೆ ಬಂದು "ಒಡೆಯ, ಕೌರವರು ನಿಮ್ಮ ಆಕಳುಗಳನ್ನೆಲ್ಲ ಹಿಡಿದುಕೊಂಡು ಹೋಗುತ್ತಿದ್ದಾರೆ. ಈಗ ನೀವು ಅವರ ಮೇಲೆ ತೋಳ ಬಲವನ್ನು ತೋರಿಸಿ ಒಳ್ಳೆ ಹೆಸರುವಾಸಿಯನ್ನು ಪಡೆಯಬೇಕು; ನಿಮ್ಮ ತಾಯಿಯು ಒಳ್ಳೆ ಗಂಡಸುಮಗನನ್ನು ಹಡೆದಳೆನಿಸಬೇಕು. ಬೇಗ ಏಳಿರಿ. ಬಿಲ್ಲನ್ನು ತೆಗೆದುಕೊಳ್ಳಿರಿ. ಹಗೆಗಳ ಕಡೆಗೆ ಹೆಜ್ಜೆಯನ್ನು ಹಾಕಿ"– ಎಂದು ಗಡಿಬಿಡಿಯಿಂದ ಹೇಳಿದನು. ಈ ಮಾತನ್ನು ಕೇಳಿದೊಡನೆ ಉತ್ತರಕುಮಾರನು ತನ್ನ ಸಭೆಯಲ್ಲಿದ್ದ ಹೆಂಗಸರ ಮುಂದೆ ತನ್ನ ಕುಡಿಮೀಸೆಯನ್ನು ಹುರಿಮಾಡುತ್ತ "ಬೇಕಾದ ಹಾಗೆ ಹೋರಾಡಬಲ್ಲ ನನಗೆ ಗಾಡಿಯನ್ನು ಹೊಡೆಯುವವನೊಬ್ಬನಿದ್ದರೆ ಆ ಕೌರವರು ನನ್ನನ್ನು ಕಂಡೊಡನೆ ಆರನೆ ಪಾಂಡವನೆನ್ನುವಂತೆ ಆಗುವ ಹಾಗೆ ಮಾಡಿಬಿಡುತ್ತಿದ್ದೆನಲ್ಲ!"– ಎಂದು ಗಲ್ಲದ ಮೇಲೆ ಬೆರಳಿಟ್ಟುಕೊಂಡು ಆಕಾಶವನ್ನು ನಿಟ್ಟಿಸಿದನು. ಈ ಮಾತನ್ನು ಕೇಳಿ ಸೈರಂಧ್ರಿಯು ಸೂಚಿಸಿದಂತೆ ಉತ್ತರೆಯು ಬೃಹನ್ನಳೆಯನ್ನು ಗಾಡಿಯ ಕೆಲಸಕ್ಕೆ ಉಪಯೋಗಮಾಡಿಕೊಳ್ಳುವದಕ್ಕೆ ಅಣ್ಣನನ್ನು ಒಪ್ಪಿಸಿ ಆಮೇಲೆ ಬೃಹನ್ನಳೆಯನ್ನು ಕರೆದುಕೊಂಡೂ ಬಂದಳು. ಆ ಬರೀ ಹೆಂಗಸರ ಸಭೆಗೆ ಬಂದಾಗ ಅರ್ಜುನನು ರಾಜನ ಮಗನಾದ ಉತ್ತರನನ್ನು ಗೌರವಿಸುವದಕ್ಕಾಗಿ ಮಾತಾಡದೆ ತಲೆಯನ್ನು ಬಗ್ಗಿಸಿದನು ಮತ್ತು ಅಲ್ಲಿರುವ ಹೆಂಗಸರು ನಗುವಂತೆ ಅಂಗಿಯನ್ನು ತಲೆಕೆಳಗಾಗಿ ಧರಿಸಿದನು. ಅರ್ಜುನನು ಆಗ ನಪುಂಸಕನಾಗಿದ್ದರೂ ಗಾಡಿಯನ್ನು ಹೊಡೆಯುವ ಕೆಲಸಕ್ಕೆ ಶೋಭಿಸುವನೆಂಬ ವಿಷಯದಲ್ಲಿ ಎಲ್ಲರೂ ಮೆಚ್ಚುವಂತಿದ್ದನು. ಈಶ್ವರನು ಬ್ರಹ್ಮನನ್ನು ತನ್ನ ಗಾಡಿಯನ್ನು ನಡೆಸುವದಕ್ಕಿಟ್ಟುಕೊಂಡಂತೆ ಉತ್ತರನು ಅರ್ಜುನನ ಸಂಬಂಧವನ್ನು ಹೊಂದಿ ನಗುತ್ತ ಇನ್ನು ತಾನು ಹಗೆಗಳನ್ನು ಸುಟ್ಟುಬಿಡುವೆನೆಂದು ತಿಳಿದುಕೊಂಡನು. ಆಗ ಉತ್ತರೆ ಮೊದಲಾದ

ಹೆಂಗಸರು ಬಂದು ನೆಯ್ಗೆಯವರ ಕೈಮುಟ್ಟದೆ ಭಗವಂತನು ದ್ರೌಪದಿಗೆ ಅನುಗ್ರಹಿಸಿಕೊಟ್ಟ ಉತ್ಕೃಷ್ಟವಾದ ಸೀರೆಗಳನ್ನು ಕೌರವರ ಭಂಡಾರದಿಂದ ಸುಲಿದು ತಂದು ತಮಗೆ ಕೊಡೆಂದು ಬೃಹನ್ನಳೆಯನ್ನು ಕೇಳಿಕೊಂಡರು.

ಅಷ್ಟು ಹೊತ್ತಿಗೆ ತೆಂಕಲ ಕಡೆ ಭೀಮನು ತೋರಿಸಿದ ಪರಾಕ್ರಮದ ಸುದ್ದಿ ಊರಿನಲ್ಲೆಲ್ಲ ಹರಡುತ್ತ ಬಂದು ಅಡಿಗೆಯವರನ್ನೆಲ್ಲ ಆನಂದದಲ್ಲಿ ಮುಳುಗಿಸಿ ಬಿಟ್ಟಿತು. ಹಿರಿಯ ಹೆಂಗಸರು ಸುಧೇಷ್ಣೆಯ ಬಳಿಗೆ ಬಂದು ಈ ದಿನ ನೀನು ವೀರನ ಹೆಂಡತಿಯೂ ವೀರನ ತಾಯಿಯೂ ಆಗುವೆಯೆಂದು ಹೊಗಳುತ್ತಿದ್ದರು. ತಲೆಯ ಮೇಲೆ ಕೈಗಳನ್ನು ಹೊತ್ತುಕೊಂಡು ತಮ್ಮ ಗೊಲ್ಲ ಗೌಡರ ಗತಿಯೇನೆಂದು ಕೊರಗುತ್ತಿರುವ ಗೊಲ್ಲತಿಯರಿಗೆ ಉತ್ತರವನ್ನು ಹೇಳುವದಕ್ಕೆ ಯಾರೂ ಇಲ್ಲದಂತೆ ಗಂಡಸರೆಲ್ಲ ವಿರಾಟನ ಹಿಂದೆ ಹೋಗಿದ್ದರು. ಉತ್ತರನು ತೇರನ್ನೇರುತ್ತಲೆ ಹೆಂಗಸರೆಲ್ಲರೂ ಅವನ ಮೇಲೆ ಅರಳನ್ನೆರಚಿದರು. ಮತ್ತು ಅವನು ಮುಂದೆ ತಂದುಕೊಡುವ ದ್ರೌಪದಿಯ ವಸ್ತ್ರಗಳಿಗೆ ಮುಂಗಡವಾದ ಬೆಲೆಯಾಗಿ ಅವನನ್ನು ಹರಸಿದರು. ಆಗ ಅವನು ಸಭಾಭವನದಲ್ಲಿ ಗೋಡೆಗಳ ಮೇಲೆ ಬರೆದಿದ್ದ ಯುದ್ಧದ ಚಿತ್ರವನ್ನು ನೋಡುತ್ತ ಹೊರಟನು. ಬೃಹನ್ನಳೆಯು ತನ್ನ ತೇರಿನ ಕುದುರೆಗಳನ್ನು ಬಿಸುಕಿದನು

ರಥವು ಒಡನೆ ಕದಲಿನಂತಿದ್ದ ಹಗೆಗಳ ದಂಡಿನ ಬಳಿಗೆ ಬಂತು. ಅವರ ಆರ್ಭಟವನ್ನು ನೋಡುತ್ತಲೆ ಉತ್ತರನ ಮನಸ್ಸು ಬೆದರಿತು ; ಅವನ ಕಣ್ಣು ನೀರುದುರಿಸಿತು ; ಅವನ ಬುದ್ಧಿ ಮೂರ್ಛೆಗೊಂಡಿತು ; ಅವನ ಮೈಗೆ ನಡುಕಹತ್ತಿತು ; ಅವನ ಗಂಟಲಿನಿಂದ ಹೊರಡುವ ಶಬ್ದವಾಗಲೇ ಕೆಟ್ಟಿತು ; ಅವನ ನಾಲಿಗೆ ಒಣಗುತ್ತ ಬಂತು. ಆಗ ಮುಂದೇನು ಮಾಡಬೇಕೆಂಬುದು ತೋಚದೆ ಉತ್ತರನು ತೇರಿನಿಂದ ಕೆಳಕ್ಕೆ ಧುಮ್ಮಿಕ್ಕಿ ಊರ ಕಡೆಗೆ ಓಟವನ್ನು ತೆಗೆದನು. ಇದನ್ನು ಕಂಡು ಅರ್ಜುನನು ಹಗೆಗಳಿಗೆ ಬೆನ್ನು ತೋರಿಸದೆ ತಾನೂ ಧುಮ್ಮಿಕ್ಕಿ ಹಿಮ್ಮುಖವಾಗಿ

ಓಡಿ ಉತ್ತರನನ್ನು ಹಿಡಿದನು. ಆ ಹೊತ್ತಿನಲ್ಲಿ ಉತ್ತರನು ದೈನ್ಯತೆಯನ್ನು ತೋರಿಸುತ್ತ "ಹೇ ಬೃಹನ್ನಳೆ, ನನ್ನನ್ನೇನು ಮಾಡಬೇಕೆಂದಿರುವೆ? ಈ ಕೌರವರ ಸೈನ್ಯವು ನನ್ನ ಕಣ್ಣಿನಲ್ಲಿ ಹಿಡಿಯುವಂತಿಲ್ಲ. ತೇರನ್ನು ಬೇಗ ಹಿಂದಿರುಗಿಸು. ಹೋರಾಡುವ ಬಯಕೆ ಸಾಕು. ಉಳಿದ ನನ್ನ ಆಯುಸ್ಸನ್ನೆಲ್ಲ ನಾನು ಮನೆಯಲ್ಲಿಯೇ ಕಳೆಯುತ್ತೇನೆ. ಕೌರವರು ಹಸುಗಳನ್ನು ಮಾತ್ರವೇ ಅಲ್ಲದೆ ಕರುಗಳನ್ನೂ ಹೊಡೆದುಕೊಂಡು ಹೋಗಲಿ. ಗೊಲ್ಲರ ಹಟ್ಟಿಗಳನ್ನು ಬೇಕಾದರೆ ಸುಡಲಿ. ಗೊಲ್ಲರನ್ನು ಬೇಕಾದರೆ ಹೊಡೆಯಲಿ. ನನಗೆ ಮಾತ್ರ ಓಟವೇ ಗತಿ. ನನ್ನ ಪ್ರಾಣಗಳ ಬೆಲೆಯು ನಿನಗೆ ಸ್ವಲ್ಪವೂ ತಿಳಿದಿಲ್ಲವಲ್ಲ! ಹೇ ಬೃಹನ್ನಳೆ, ಗಾಬರಿಗೊಂಡಿರುವ ನನಗೆ ಬಾರಿಬಾರಿಗೂ ತಾಯ ಮುಖವೇ ಎದುರಿಗೆ ಬಂದು ನಿಲ್ಲುತ್ತದೆ. ನನ್ನನ್ನು ಅಮ್ಮನ ಬಳಿಗೆ ಸೇರಿಸು ಆ ನನ್ನ ತಾಯಿಯು ನಮ್ಮ ಭಂಡಾರವಲ್ಲಿರುವ ಹೊನ್ನಿನ ನಾಣ್ಯಗಳಿಂದ ನಿನಗೆ ಅಭಿಷೇಕ ಮಾಡುತ್ತಾಳೆ. ಚಿತ್ರದಲ್ಲಿರುವ ಸುಳ್ಳು ಹೋರಾಟವನ್ನು ನೋಡಿ ನಿಜವಾದ ರಣರಂಗಕ್ಕೆ ಬಂದು ಮೋಸಹೋದೆನು. ನಾನಿನ್ನು ಯುದ್ಧಕ್ಕೆಂದು ತೇರನ್ನು ಹತ್ತಿದೆನೆಂದರೆ ನನ್ನ ಪ್ರಾಣಗಳು ಹೃದಯವನ್ನು ಬಿಟ್ಟು ಕುತ್ತಿಗೆಗೆ ಹತ್ತುವದೇ ಸರಿ"— ಎಂದು ಹೇಳಿಕೊಂಡು ಗೊಳಾಡುತ್ತ ಅರ್ಜುನನ ಕಾಲ ಮೇಲೆ ಬಿದ್ದನು.

ಅರ್ಜುನನು ಅವನನ್ನು ಗಟ್ಟಿಯಾಗಿ ಹಿಡಿದುಕೊಂಡು ನಗುತ್ತ "ಎಲೈ ಕುಮಾರನೆ, ವಿರಾಟನ ಹೊಟ್ಟೆಯಲ್ಲಿ ಇಂಥ ನೀನು ಹೇಗೆ ಹುಟ್ಟಿದೆ? ಏಕೆಂದರೆ: ನಿಮ್ಮಪ್ಪನು ಮುದುಕನಾಗಿದ್ದರೂ ಕೂಡ ಈಗಲೂ ಹಗೆಗಳ ಮೇಲೆ ಹೋರಾಡುವ ಉಬ್ಬಟೆಯುಳ್ಳವನಾಗಿದ್ದಾನೆ. ಗಾಡಿಯನ್ನು ಹೊಡೆಯುವವನಾದ ನಾನೆ ಹೆದರದೆ ಇರುವಾಗ ನೀನು ಹೀಗೆ ಹೇಡಿಯಾಗುವವಕ್ಕಿಂತಲೂ ನಿನ್ನ ಮನೆತನಕ್ಕೆ ಅಪಮಾನವನ್ನು ತರುವಂಥದ್ದಿನ್ನೇನಿದೆ? ಅಂತಃಪುರದಲ್ಲಿದ್ದ ಹೆಂಗಸರ ನಡುವೆ ಬಾಯಿಗೆ ತಡೆಯೇ ಇಲ್ಲದಂತೆ ಗಂಡಸುತನವನ್ನು ಕೊಚ್ಚಿಕೊಂಡು ಈಗ ಯುದ್ಧವೆಂದರೆ ನಡುಗುತ್ತ ಓಡಿಹೋದ ನಿನ್ನನ್ನು

ನೋಡಿ ಆ ಹೆಂಗಸರೆಲ್ಲರೂ ಹೊಟ್ಟೆ ಹುಣ್ಣಾಗುವಷ್ಟು ನಗುವದಿಲ್ಲವೆ? ನಿಮ್ಮಣ್ಣನು ಎಂಥ ಶೀರೆಗಳನ್ನು ಎಷ್ಟು ತಂದನೆಂದು ಗೆಳತಿಯರು ಉತ್ತರೆಯನ್ನು ಕೇಳಿದರೆ ಆ ಅಭಿಮಾನಿಯಾದ ಉತ್ತರೆಯು ಏನುತ್ತರ ವನ್ನು ಕೊಡಬೇಕು? ಹೇ ಉತ್ತರ, ನೀನೇ ಹೇಳು. ನಿಮ್ಮ ತಂದೆಯು ಮುದುಕನಾಗಿದ್ದಾನೆ. ನಿಮ್ಮ ತಾಯಿಯ ತಮ್ಮಂದಿರಾದ ಕೀಚಕರೆಲ್ಲ ಹೇಳುವದಕ್ಕೆ ಹೆಸರಿಲ್ಲದಂತಾದರು. ನೀನಾದರೋ ಜಳ್ಳೆದೆಯುವನಾ ಗಿದ್ದಿ. ಹೀಗಾದರೆ ರಾಜ್ಯವು ನಿನ್ನ ಕೈಯಲ್ಲಿ ನಿಲ್ಲುವದಿಲ್ಲ. ಆದ್ದರಿಂದ ಹೆದರಿಕೆಯನ್ನು ಕೊಡವಿಹಾಕು. ಬಿಲ್ಲು ಹಿಡಿ. ಹಗೆಗಳನ್ನು ಹುಲ್ಲಿ ಗಿಂತ ಕಡೆಯಾಗಿ ಕಾಣು"– ಎಂದು ಬೆನ್ನು ಚಪ್ಪರಿಸಿದನು. ✓

## ಅರ್ಜುನನ ಗೆಲವು

ಅರ್ಜುನನು ಹೀಗೆ ಅವನನ್ನು ಹುರಿದುಂಬಿಸಿ ಸುಡುಗಾಡಿನ ಹತ್ತಿರಕ್ಕೆ ಬಂದು ಶಮೀವೃಕ್ಷದ ಮೇಲಿನಿಂದ ತನ್ನ ಕಿರೀಟ, ಶಂಖ, ಬಿಲ್ಲು, ಬತ್ತಳಿಕೆ– ಇವುಗಳನ್ನು ಉತ್ತರನಿಂದಲೇ ಇಳಿಸಿಕೊಂಡು ಧರಿಸಿ ಆಗ ತನ್ನ ಗಂಡಸುತನವನ್ನು ಹೊರಗೆಡವಿದನು. ಆಗ ಉತ್ತರನ ಧೈರ್ಯವು ಚಿಗುರಿತು. ಆಮೇಲೆ ಉತ್ತರನೇ ಗಾಡಿಯನ್ನು ಹೊಡೆಯು ವದಕ್ಕೆ ಕುಳಿತನು. ಹೀಗೆ ಅರ್ಜುನನು ಹಗೆಗಳ ದಂಡಿನ ಮುಂದಕ್ಕೆ ಬಂದು ನಿಂತನು. ಯಾರ ಬಿಲ್ಲಿನ ಅಪ್ಪಳಿಸುವಿಕೆಯಿಂದ ಗಂಡನ ತಲೆಯು ಲ್ಲಾದ ಗಾಯವು ಮಾಯುವದಕ್ಕಾಗಿ ಪಾರ್ವತಿಯು ತನ್ನ ಪೀತಾಂಬ ರದ ಒದ್ದೆಬಟ್ಟೆಯನ್ನು ಕಟ್ಟಬೇಕಾಯಿತೋ ಅಂಥ ಅರ್ಜುನನು ಎದು ರಾಳಿಗಳನ್ನು ಒಮ್ಮೆ ನೋಡಿ ಒಡನೆ ತನ್ನ ಬಿಲ್ಲಿನ ಕಡೆಗೆ ಕಣ್ಣುಹಾಕಿ ದನು. ಆಮೇಲೆ ಅವನ ಶಂಖದ ಧ್ವನಿಯು ಹತ್ತು ದಿಕ್ಕುಗಳಲ್ಲಿಯೂ ಹಬ್ಬಿತು. ಆಗ ಆನೆಗಳು ತಲೆತಿರುಗಿದವುಗಳಾದವು; ಕುದುರೆಗಳು ಎಚ್ಚರದಪ್ಪಿದವು; ತೇರಿನವರು ತಲ್ಲಣಿಸಿದರು; ಕಾಲಾಳುಗಳ ಎದೆ ಡಬ್ಬೆಂದಿತು. ಗಂಧರ್ವರೊಡನೆ ಯುದ್ಧವನ್ನು ಮಾಡಿದಮೇಲೆ ಇದು ವರೆಗೂ ಸದ್ದು ಮಾಡದೆ ಇದ್ದ ಗಾಂಡೀವವು ಈಗ ಝೇಂಕಾರವನ್ನಾ ರಂಭಿಸಿತು. ಇದರಿಂದ ಅವನು ಅರ್ಜುನನೇ ಆಗಿರುವನೆಂದೂ ಗುರ್ತು

ತಿಳಿಯುದಂತೆ ಇರಬೇಕಾದ ಅವಧಿಯನ್ನು ಮುಗಿಸಿಕೊಂಡು ನಮ್ಮಿಂದ ರಾಜ್ಯವನ್ನು ಕಕ್ಕಿಸುವದಕ್ಕಾಗಿ ಬಂದಿರುವನೆಂದೂ ತಿಳಿದು ಕೌರವನ ದಂಡಿನವರು ಅವನನ್ನು ಮುತ್ತಿದರು.

ಕೌರವರ ಕಡೆಯಿಂದ ಅರ್ಜುನನ ತೇರಿನ ಮೇಲೆ ಒಮ್ಮೆಗೇ ಸಾವಿರಾರು ಬಾಣಗಳು ಬಂದು ಬಿದ್ದವು. ತನ್ನ ಬಾಣಗಳು ಸುಡುಗಾಡಿನಲ್ಲಿದ್ದ ಮೈಲಿಗೆಯನ್ನು ಕಳೆಯುವದಕ್ಕಾಗಿ ಅರ್ಜುನನು ಅವುಗಳನ್ನು ಹಗೆಗಳ ರಕ್ತದಲ್ಲಿ ತೊಳೆಯುವದಕ್ಕಾರಂಭಿಸಿದನು. ಅವನು ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವದು, ಹೂಡುವದು, ಬಿಡುವದು– ಇವು ಬೇರೆಬೇರೆಯಾಗಿ ಕಾಣಿಸದಷ್ಟು ಕೈಚಳಕವನ್ನು ತೋರಿಸಿದನು ; ಮುಂದೆ ತಾನು ಮೋಹನಾಸ್ತ್ರದಿಂದ ಮಲಗಿಸುವ ಸೈನಿಕರಿಗೆ ತಲೆಗಿಂಬಾಗಿರುವಂತೆ ಆನೆಗಳ ಸೊಂಡಿಲುಗಳನ್ನು ಸಾಲುಸಾಲಾಗಿ ಕಡಿದುಹಾಕಿದನು ; ಆಮೇಲೆ ಮೋಹನಾಸ್ತ್ರವನ್ನು ಹೂಡಿಬಿಟ್ಟು ಎಲ್ಲರೂ ಮೈಮರೆತು ನೆಲದ ಮೇಲೆ ಒರಗುವಂತೆ ಮಾಡಿದನು. ಬ್ರಹ್ಮನು ಬೆಳ್ಳಗಿರುವ ಗಂಗಾನದಿಯನ್ನೂ ಕಪ್ಪಗಿರುವ ಯಮುನಾನದಿಯನ್ನೂ ಹೊಂಬಣ್ಣವಾದ ಸರಸ್ವತೀನದಿಯನ್ನೂ ಹುಟ್ಟಿಸಿದ್ದದ್ದನ್ನು ನೋಡಿ ತನ್ನ ಹೆಚ್ಚುಗಾರಿಕೆಯನ್ನು ತೋರಿಸುವದಕ್ಕೆ ಅರ್ಜುನನು ರಣರಂಗದಲ್ಲಿ ಕೆಂಪುನದಿಯನ್ನು ಹರಿಸಿದನು.

ಆ ಸಡಗರದಲ್ಲಿ ಕರ್ಣನು ಯಾವ ಮೂಲೆಯಲ್ಲಿ ಮುದುರಿಕೊಂಡಿದ್ದನೊ ಪಂಜು ಹಿಡಿದುಕೊಂಡು ಹುಡುಕಾಡಬೇಕಾಗಿತ್ತು. ದುರ್ಯೋಧನನ ಬಿಳೀ ಕೊಡೆಯೇ ಕಳೆದುಹೋಗಿತ್ತು. ದ್ರೋಣನ ಧ್ವಜವು ಮುರಿದಿತ್ತು. ಅಶ್ವತ್ಥಾಮನ ಬಿಲ್ಲು ಚೂರುಚೂರಾಗಿತ್ತು. ಭೀಷ್ಮನೂ ಎಚ್ಚರದಪ್ಪಿದ್ದನು. ಹೀಗೆ ಕೌರವರೆಲ್ಲ ಕಂಗೆಟ್ಟಿದ್ದರು. ಆಕಾಶದಲ್ಲಿ ವಿಮಾನದಲ್ಲಿದ್ದು ನೋಡುತ್ತಿದ್ದ ಊರ್ವಶಿಯು ಕೂಡ ಅರ್ಜುನನ ಉರುಬೆಗೆ ಬೆರಗಾಗಿ ತಲೆದೂಗಿದಳು. ದೇವತೆಗಳೆಲ್ಲರೂ ಅವನ ಮೇಲೆ ಹೂವಿನ ಮಳೆಯನ್ನು ಕರೆದರು. ದ್ರೌಪದಿಯ ಬಟ್ಟೆಗಳನ್ನು ಸುಲಿದುಕೊಂಡದ್ದಕ್ಕೆ ಮುಯ್ಯಿತೀರಿಸಬೇಕೆಂದು ಅರ್ಜು

ನನು ಉತ್ತರನಿಂದ ಅವರ ಉತ್ತಮವಾದ ವಸ್ತ್ರಾಭರಣಗಳನ್ನೆಲ್ಲ ಸುಲಿಗೆಮಾಡಿಸಿದನು. ಆಮೇಲೆ ತನ್ನ ಗುರುಗಳಾದ ದ್ರೋಣಾಚಾರ್ಯರೇ ಮೊದಲಾದವರಿಗೆ ಹಗಲುನಿದ್ರೆಯನ್ನುಂಟುಮಾಡಬಾರದೆಂದು ಯೋಚಿಸಿಕೊಂಡು ಒಡನೆ ತನ್ನ ಮೋಹನಾಸ್ತ್ರವನ್ನು ಹಿಂದೆಗೆದುಕೊಂಡನು. ಆಗ ಕೌರವರು ತಮ್ಮ ಕೆಂಗಣ್ಣುಗಳನ್ನು ಕೈಯಿಂದ ಉಜ್ಜಿಕೊಳ್ಳುತ್ತ ಬಹಳವಾಗಿ ಆಕಳಿಸುತ್ತ ಬಹಳ ಹೊತ್ತಿನ ಮೇಲೆ ಎಚ್ಚರಗೊಂಡರು. ದುರ್ಯೋಧನನಿಗೆ ಎಚ್ಚರವಾದಾಗ ಅವನ ವಸ್ತ್ರಾಭರಣಗಳೆಲ್ಲ ಉತ್ತರನಿಗೆ ಸೂರೆಯಾಗಿ ಹೋಗಿದ್ದದ್ದರಿಂದ ಅವನಿಗೆ ತಾನು ಬೆತ್ತಲೆಯಾಗಿರುವ ಆ ಅವಮಾನವು ಗಂಧರ್ವರಿಗೆ ಸೆರೆ ಸಿಕ್ಕಿದ್ದಕ್ಕಿಂತ ಹೆಚ್ಚೆಂದು ತಿಳಿಯಿತು. ಹೀಗಾಗಿ ಕೌರವನ ಕಡೆಯವರೆಲ್ಲ ಧ್ವಜಪಟಗಳನ್ನು ಹರಿದು ಕೌಪೀನವನ್ನು ಮಾಡಿಕೊಂಡು ಹಿಂದಕ್ಕೆ ತೆರಳಬೇಕಾಯಿತು. ✓

ಇಷ್ಟಾದ ಮೇಲೆ ತನ್ನ ಗೆಲವನ್ನು ಸೂಚಿಸುವದಕ್ಕಾಗಿ ಅರ್ಜುನನು ತನ್ನ ದೇವದತ್ತವನ್ನೂದಿದನು ಮತ್ತು ತನ್ನ ಬಾಣಗಳನ್ನು ಕಾಪಾಡಿಕೊಂಡಿದ್ದ ಸುಡುಗಾಡಿನ ಪಿಶಾಚಿಗಳಿಗೆಲ್ಲ ಬಿಸಿಬಿಸಿ ರಕ್ತದ ಔತನವನ್ನು ಮಾಡಿ ಮತ್ತೆ ಆ ಬಾಣಗಳನ್ನೆಲ್ಲ ಅಲ್ಲಿಯೇ ಇಡಿಸಿದನು. ಇನ್ನು ಊರ ಕಡೆಗೆ ಹೊರಡುತ್ತಲೆ ಅರ್ಜುನನು ಮತ್ತೆ ನಪುಂಸಕನಾಗಿ ಕುದುರೆಗಳ ಹಗ್ಗಗಳನ್ನು ಹಿಡಿದುಕೊಂಡು ಉತ್ತರನನ್ನು ಕುರಿತು "ಎಲೈ ಉತ್ತರನೆ, ಜುಟ್ಟನ್ನು ಗಂಟುಹಾಕಿಕೊ ; ಕಣ್ಣೀರು ಹರಿದಿರುವ ಕಲೆಯನ್ನು ಒರೆಸಿಕೊ ; ಬತ್ತಳಿಕೆಯನ್ನು ಹೆಗಲಿಗೆ ಹಾಕಿಕೊ ; ಬಟ್ಟೆಗಳ ಹೇರಿನ ಮೇಲೆ ಕುಳಿತುಕೊ ; ಧೈರ್ಯವನ್ನು ತಂದುಕೊ ; ಹಗೆಗಳನ್ನು ಗೆದ್ದವನು ನೀನೇ ಎಂದು ಎಲ್ಲರಿಗೂ ಹೇಳು. ಯಾರಿಗೂ ನನ್ನ ಗುಟ್ಟನ್ನು ಹೊರಬಿಡಬೇಡ" ಎಂದು ಹೇಳಿದನು. ಉತ್ತರನು ಅನಕ್ಕೆ ಹೂಂಗುಟ್ಟಿ ತೇರಿನ ಮೇಲೆ ಕುಳಿತನು. ಅರ್ಜುನನು ತೇರನ್ನು ನಡೆಸುತ್ತಿರುವಾಗ ರಕ್ತದ ಕೆಸರಿನಿಂದ ಕೆಂಪಾದ ಚಕ್ರದಲ್ಲಿರುವ ಕಬ್ಬಿಣದ ಪಟ್ಟಿಗಳು ಹಗೆಗಳಿಗೆ ಉತ್ಪಾತಸೂಚಕವಾದ ಕೋಳಿಯ ಚಕ್ರ

ಗಳಾಗಿ ಕಾಣುವಂತಿದ್ದವು. ಕುದುರೆಗಳ ಗೊರಸುಗಳ ಹೊಡೆತದಿಂದ ಭೂಮಿಯೆಲ್ಲ ಧೂಳಿದ್ದಿತು. ಈ ಸ್ಥಿತಿಯಲ್ಲಿ ಉತ್ತರನು ಊರಿಗೆ ಬಂದನು. ಬೇಕಾದಷ್ಟು ವಾದ್ಯಗಳಾದವು; ಹೊಗಳಿಕೆಗಳಾದವು; ಉತ್ತರನು ತಂದೆಯ ಮುಂದಕ್ಕೆ ಬಂದು ನಿಂತನು.

## ಪಾಂಡವರು ವೇಷಾಂತರವನ್ನು ತೆಗೆದೊಗೆದದ್ದು

ತಂದೆಯಾದ ವಿರಾಟನು ಗೆದ್ದು ಬಂದ ಸಂದರ್ಭದಲ್ಲಿ ಮಾಡಿದ್ದ ನಗರಾಲಂಕಾರವೇ ಮಗನಾದ ಉತ್ತರನಿಗೂ ಆಯಿತು. ಉತ್ತರನು ಬಂದು ತಂದೆಗೆ ಅಡ್ಡಬಿದ್ದಾಗ ಅವನ ಕವಚಗಳು ರಕ್ತದಿಂದಲೂ ಕಣ್ಣೀರಿನಿಂದಲೂ ಒದ್ದೆಯಾಗಿದ್ದವು. ವಿರಾಟನು ಸುಶರ್ಮನ ಕಟ್ಟಿಗೆ ಸಿಕ್ಕಿ ಬಳಲಿದವನಾಗಿದ್ದರೂ ಮಗನನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಅರ್ಜುನನು ತೇರಿನಲ್ಲಿದ್ದ ಬಟ್ಟೆಯ ಮೂಟೆಯನ್ನು ತಂದು ಉತ್ತರೆಯ ಮುಂದಿಟ್ಟನು. ಉತ್ತರನು ಅವುಗಳಲ್ಲಿ ಒಳ್ಳೆ ಬೆಲೆಯುಳ್ಳವುಗಳನ್ನು ಉತ್ತರೆಗೆ ಕೊಟ್ಟು ಉಳಿದವುಗಳನ್ನು ದಾಸಿಯರಿಗೆಲ್ಲ ಹಂಚಿಬಿಟ್ಟನು. ದ್ರೌಪದಿಯು ಮಾಸಿದ ಬಟ್ಟೆಗಳನ್ನುಟ್ಟುಕೊಂಡಿದ್ದರೂ ಅವಳಿಗೆ ಏನನ್ನೂ ಕೊಡಲಿಲ್ಲ. ವಿರಾಟನು ಮಗನನ್ನು ತನ್ನ ಪೀಠದ ಮೇಲೆ ಕುಳ್ಳಿರಿಸಿಕೊಂಡು ಮುಂದಲೆಯನ್ನು ಮೂಸಿ ನೋಡಿ “ಯಾರು ಪಾಂಡವರನ್ನು ಜೂಜಿನಿಂದ ಅಡವಿಗೆ ಅಟ್ಟಿ ಹಗೆಗಳೇ ಇಲ್ಲದಂತೆ ಮಾಡಿಕೊಂಡರೋ ಅಂಥ ಕೌರವರ ಗಂಟಲಿಗೆ, ಮಗು, ನೀನೊಬ್ಬನೇ ಗಾಣವಾದೆ. ಯುದ್ಧದಲ್ಲಿ ಬೃಹನ್ನಳೆಯು ಸತ್ತಿದ್ದರೆ ಉತ್ತರೆಯು ತನ್ನ ವಿದ್ಯಾಭ್ಯಾಸಕ್ಕೆ ಮತ್ತೊಬ್ಬ ಆಚಾರ್ಯನನ್ನು ಆರಿಸಬೇಕಾಗಿ ಬರುತ್ತಿತ್ತಲ್ಲ! ಅವನನ್ನೂ ಕಾಪಾಡಿಕೊಂಡು ನೀನು ಅವರನ್ನು ಹೇಗೆ ಗೆದ್ದೆ?” ಎಂದು ಮುಪ್ಪಿನಿಂದ ನಡುಗುತ್ತಿರುವ ಕೈಯಿಂದ ಅವನ ಬೆನ್ನು ತಡವರಿಸುತ್ತ ಕೇಳಿದನು. ಆಗ ಉತ್ತರನು ನಾಚಿಕೆಯಿಂದ ಮುಖವನ್ನು ಮುಚ್ಚಿಕೊಳ್ಳುತ್ತ ನಾನು ಹಗೆ

ಗಳೆದುರಿನಲ್ಲಿ ನೆಲವೂ ಆಕಾಶವೂ ಗಿಟ್ಟಗಿರಿಯುವಷ್ಟು ಅಬ್ಬರಿಸಿದೆನು * ; ನನ್ನ ವೇಗವನ್ನೆಲ್ಲರಿಗೂ† ಕಾಣಿಸಿದೆನು ; ಇದರ ಮೇಲೆ ತೇರಾಳೂ‡ ಆದೆನು ; ಗಾಡಿಯನ್ನು ಹೊಡೆಯುವವನೂ ಆದೆನು ; ಕಾಲಾಳೂ ಆದೆನು ; ನನ್ನ ಯಾವ ಉದ್ಯೋಗವೂ ಅಪಾರ್ಥವಾಗಲಿಲ್ಲ ;§ ಆದ್ದರಿಂದ ವಿಜಯದಿಂದ|| ಕೂಡಿದವನಾಗಿ ಊರಿಗೆ ಬಂದೆನು" ಎಂದು ಹೇಳಿದನು.

ಮರುದಿನ ವಿರಾಟನಿಗೆ ಪಾಂಡವರ ನಿಜಸ್ಥಿತಿಯು ತಿಳಿಯಿತು. ಆಗ ಅವನು ಬಿರಗಾಗಿ ಮಂತ್ರಿಗಳನ್ನೂ ಪರಿವಾರದವರನ್ನೂ ಕೂಡಿಕೊಂಡು ಸಭೆಗೆ ಬಂದನು. ಬೇರೆ ಬೇರೆ ಹೆಸರುಗಳಿಂದಲೂ ವೇಷಗಳಿಂದಲೂ ಒಂದು ವರ್ಷವನ್ನು ನೂಕಿ ಈಗ ತಮ್ಮ ನಿಜವಾದ ವೇಷದಿಂದ ಭೀಮನೇ ಮೊದಲಾದವರು ಸೇವಿಸುತ್ತಿದ್ದ ಯುಧಿಷ್ಠಿರನ ಪಾದಗಳಿಗೆ ಆ ತಲೆನರೆತ ವಿರಾಟನು ಎರಗಿದನು. ಆಮೇಲೊಂದು ದಿನ ವಿರಾಟನು ಶುಭಮುಹೂರ್ತದಲ್ಲಿ ನಂಟರಿಷ್ಟರೊಡನೆ ಶ್ರೀಕೃಷ್ಣನನ್ನು ಬರಮಾಡಿಕೊಂಡು ತನ್ನ ಮಗಳಾದ ಉತ್ತರೆಯನ್ನು ಅರ್ಜುನನ ಮಗ

* ಸಿಂಹನಾದವನ್ನು ಮಾಡಿದೆನೆಂಬುದು ತೋರುವ ಅರ್ಥ ; ಅತ್ತೆನೆಂಬುದು ನಡೆದರ್ಥ.

† ಬಾಣದ ವೇಗವನ್ನು ತೋರಿಸಿದೆನೆಂಬುದು ತೋರುವ ಅರ್ಥ ; ಕಾಲಿನ ವೇಗವನ್ನು ತೋರಿಸಿದೆನೆಂಬುದು ನಡೆದರ್ಥ.

‡ ಎಲ್ಲ ಕೆಲಸವನ್ನೂ ನಾನೇ ಮಾಡಿಕೊಂಡೆನೆಂಬುದು ತೋರುವ ಅರ್ಥ ; ಊರಿನಿಂದ ಹೊರಡುವಾಗಲೂ ಹಿಂದಿರುಗಿ ಬರುವಾಗಲೂ ತೇರಾಳಾಗಿಯೂ ಯುದ್ಧ ನಡೆಯುವಾಗ ಗಾಡಿಯನ್ನು ಹೊಡೆಯುವವನಾಗಿಯೂ ಓಡುವಾಗ ಕಾಲಾಳಾಗಿಯೂ ಇದ್ದೆನೆಂಬುದು ನಡೆದರ್ಥ.

§ ವ್ಯರ್ಥವಾಗಲಿಲ್ಲವೆನ್ನುವುದು ತೋರುವ ಅರ್ಥ ; ಅರ್ಜುನನ ಹೊರತು ನಡೆಯಲಿಲ್ಲವೆನ್ನುವುದು ನಡೆದರ್ಥ.

|| ಜಯಶಾಲಿಯಾಗಿ ಬಂದೆನೆಂಬುದು ತೋರುವ ಅರ್ಥ ; ಅರ್ಜುನನಿಂದ ಕೂಡಿಕೊಂಡು ಬಂದೆನೆಂಬುದು ನಡೆದರ್ಥ.

ನಾದ ಅಭಿಮನ್ಯುವಿಗೆ ಉಪಾಯನದಾನವಾಗಿ ಕೊಟ್ಟು ಪಾಂಡವರೊಡನೆ ಸಂಬಂಧವನ್ನು ಬೆಳಿಸಿದನು. ವಿರಾಟನ ಉಪಚಾರಗಳೆಲ್ಲವೂ ಮುಗಿದ ಮೇಲೆ ಶ್ರೀಕೃಷ್ಣನು ಧರ್ಮರಾಯ ಮೊದಲಾದವರನ್ನೆಲ್ಲ ಸಂತೋಷಗೊಳಿಸಿ ತನ್ನೂರಿಗೆ ತೆರಳಿದನು.

## ಪಾಂಡವರಿಗೆ ದೊರೆತ ನೆರವು

ಆಮೇಲೆ ತನ್ನ ರಾಜ್ಯಲಕ್ಷ್ಮಿಯು ತನ್ನ ಬಳಿಗೆ ಹಿಂದಿರುಗಿ ಬಂದು ನೆಲೆಯಾಗಿ ನಿಲ್ಲುವ ಯೋಜನೆಯನ್ನು ನಡೆಸುವದಕ್ಕಾಗಿ ಧರ್ಮರಾಯನು ಅನೇಕ ರಾಜರ ನೆರವನ್ನು ಬಯಸಿ ಅಕ್ಷತೆಯನ್ನು ಕಳುಹಿಸಿದನು. ಧರ್ಮರಾಯನು ಕರೆಯುತ್ತಾನೆಂದೊಡನೆ ಮಳೆಗಾಲದಲ್ಲಿ ಮೋಡಗಳು ಗುಂಪುಕಟ್ಟಿಕೊಂಡು ಬೆಟ್ಟಗಳ ಬಳಿಗೆ ಬರುವಂತೆ ಅನೇಕ ರಾಜರು ಮಹಾಸೇನೆಗಳಿಂದ ಕೂಡಿದ ದಂಡಿನೊಡನೆ ಧರ್ಮರಾಯನ ಬಳಿಗೆ ಬಂದರು. ಅತ್ತ ದುರ್ಯೋಧನನು ತನ್ನ ಕಡೆಗೆ ಇನ್ನೂ ಹೆಚ್ಚಾಗಿ ಬೆಂಬಲವನ್ನು ಸೇರಿಸಿದನು. ಇವರಲ್ಲಿ ಕೌರವಪಾಂಡವರಿಬ್ಬರಿಗೂ ಸೋದರಮಾವನಾದ ಶಲ್ಯನು ಧರ್ಮರಾಯನ ಪಕ್ಷಕ್ಕೇ ಸೇರಬೇಕೆಂದು ಬರುತ್ತಿರುವಾಗ ದುರ್ಯೋಧನನು ಅವನ ದಾರಿಯ ನಡುವೆ ಅವನಿಗೆ ಬಗೆಬಗೆಯ ಸತ್ಕಾರಗಳನ್ನು ಮಾಡಿ ಅದರ ಫಲವಾಗಿ ಅವನನ್ನು ತನ್ನ ಕಡೆಗೆ ಒಲಿಸಿಕೊಂಡನು. ಆಗ ಅವನು ಧರ್ಮರಾಯನ ಬಳಿಗೆ ಬಂದು ತಾನು ಕೌರವನಿಗೆ ಸೋತುಹೋದ ಸಂಗತಿಯನ್ನು ತಿಳಿಸಿದನು. ಆದರೂ ಯುದ್ಧದ ಕಾಲದಲ್ಲಿ ಕರ್ಣನ ಮರ್ಮವನ್ನು ಭೇದಿಸುವಂಥ ಮಾತಾಡುವವರ ರೂಪವಾದ ಸಹಾಯವನ್ನಾದರೂ ಮಾಡೆಂದು ಧರ್ಮರಾಯನು ಕೇಳಿಕೊಂಡನು. ಶಲ್ಯನು ಆ ಮಾತಿಗೆ ತಲೆಹಾಕಿ ಹಿಂದಿರುಗಿದನು.

ಇದಾದ ಮೇಲೆ ಧರ್ಮರಾಯನ ಆಜ್ಞೆಯನ್ನು ತಲೆಯಲ್ಲಿ ಹೊತ್ತು ಅರ್ಜುನನು ಶ್ರೀ ಕೃಷ್ಣನ ನೆರವನ್ನು ಬಯಸಿ ದ್ವಾರಕಿಗೆ ಬಂದನು.

ಅಲ್ಲಿಯವರು ಅವನನ್ನು ನೋಡಿ ಬಹುದಿನಗಳಾಗಿತ್ತು. ಆದ್ದರಿಂದ ಆನೆಯ ಮರಿಯಂತೆ ಜಗ್ಗು ಹಾಕಿಕೊಂಡು ಬರುತ್ತಿದ್ದ ಅರ್ಜುನನನ್ನು ನೋಡುವದಕ್ಕಾಗಿ ಜನರು ಗುಂಪುಗುಂಪಾಗಿ ನೆರೆದರು. ಸುಭದ್ರೆಯನ್ನು ಎತ್ತಿಹಾಕುವದಕ್ಕಾಗಿ ಅವನು ಕಪಟಸಂನ್ಯಾಸಿಯಾಗಿದ್ದದ್ದನ್ನು ನೆನೆದು ಅಲ್ಲಿಯ ಹೆಂಗುಸರು ಹುಸಿನಗೆಯನ್ನು ನಗುತ್ತ ಮಹಡಿಗಳ ಮೇಲಿನ ಕಿರುಬಾಗಿಲುಗಳಿಂದ ನೋಡುತ್ತಿದ್ದರು. ಅರ್ಜುನನು ಕೃಷ್ಣನ ಮನೆಗೆ ಬಂದಾಗ ಕೃಷ್ಣನು ನಿದ್ರೆಮಾಡುತ್ತಿದ್ದನು. ದುರ್ಯೋಧನನು ಅರ್ಜುನನಿಗಿಂತ ಮೊದಲೇ ಕೃಷ್ಣನ ನೆರವನ್ನು ಬಯಸಿ ಬಂದು ಅವನ ತಲೆಗಿಂಬಿನ ಹತ್ತಿರ ಕುಳಿತುಕೊಂಡಿದ್ದನು. ಎರಡು ಕಣ್ಣುಗಳನ್ನೂ ಮುಚ್ಚಿಕೊಂಡು ಅಲುಗದೆ ಮಲಗಿದ್ದ ಕೃಷ್ಣನು ಸಮಾಧಿಯ ಸುಖದಲ್ಲಿ ಮುಳುಗಿಹೋದ ತಪಸ್ವಿಗಳ ನೆನೆಪುಗೊಡುತ್ತಿದ್ದನು. ಎಚ್ಚತ್ತಮೇಲೆ ಅವನು ತನ್ನ ನೆರವನ್ನು ಬಯಸುವ ಇಬ್ಬರನ್ನೂ ನೋಡಿ ಇಬ್ಬರಿಗೂ ಸಹಾಯವು ಸರಿಯಾಗಿರಬೇಕೆಂದು ಒಂಬತ್ತು ಕೋಟಿ ಯಾದವರ ದಂಡು ಒಂದು ಪಾಲೆಂದೂ ತಾನೊಬ್ಬನೇ ಒಂದು ಪಾಲೆಂದೂ ಹಿಂಗಡಿಸಿಟ್ಟನು. ದುರ್ಯೋಧನನು ಯಾದವರ ದೊಡ್ಡ ದಂಡಿನ ತೂಕಕ್ಕೆ ಮರುಳಾಗಿ ಅದನ್ನು ತನ್ನ ಕಡೆಗೆ ತೆಗೆದುಕೊಂಡನು. ಆಗ ಶ್ರೀಕೃಷ್ಣನು ಅರ್ಜುನನ ಪಕ್ಷಕ್ಕೇ ಉಳಿದನು. ಹೀಗೆ ಇಬ್ಬರೂ ಬಂದ ಕೆಲಸವನ್ನು ಮಾಡಿಕೊಂಡು ಹೋದರು.

## ಸಂಧಿ

ಇಷ್ಟಾಗುತ್ತಲೆ ಧರ್ಮರಾಯನ ಪ್ರಯತ್ನವು ಯುದ್ಧದ ಸಿದ್ಧತೆಯಲ್ಲಿ ಚೆನ್ನಾಗಿ ಮುಂದುವರಿಯಿತು. ಅವರ ಉಬ್ಬರದ ಸುದ್ದಿಯನ್ನು ಸಂಜಯನಿಂದ ಕೇಳಿ ಧೃತರಾಷ್ಟ್ರನು ಎದೆಯೊಡೆದವನಾಗಿ ತನ್ನ ಮಗನನ್ನು ಏಕಾಂತಕ್ಕೆ ಕರೆದು ಪಾಂಡವರ ನೆಲವನ್ನು ಪಾಂಡವರಿಗೆ ಒಪ್ಪಿಸಿಬಿಡೆಂದು ಗಲ್ಲವನ್ನು ಹಿಡಿದನು. ದುರ್ಯೋಧನನು ಕೊಸರಿಕೊಂಡು ಕರ್ಣನೊಡನೆ ಶಿಬಿರಾತಾಡುವದಕ್ಕೆ ಹೋದನು.

ಹೀಗಿರುವಾಗ ವಿರಾಟನಗರದ ಬಳಿಯಲ್ಲಿಯೂ ಹಸ್ತಿನಾಪುರದ ಬಳಿಯಲ್ಲಿಯೂ ದಂಡಿನ ಗದ್ದಲಕ್ಕಿಂತಲೂ ಹದ್ದು, ಕಾಗೆ, ನಾಯಿ, ನರಿ- ಇವುಗಳ ಗದ್ದಲವೇ ಕಿವಿಗೆ ಸೀಸವನ್ನು ಕಾಸಿ ಹೊಯ್ದಂತೆ ಆಗುತ್ತಿತ್ತು. ಮುಂದೆ ಸ್ವಲ್ಪ ದಿನಗಳಲ್ಲಿಯೇ ಒಳ್ಳೇ ದಿನಗಳನ್ನು ನೋಡುವದಕ್ಕೆ ಐವರು ವೀರರು ಮಾತ್ರ ಉಳಿಯುವರೆಂಬ ಭವಿಷ್ಯವಾದಿಗಳ ಮಾತು ಎಲ್ಲೆಲ್ಲಿಯೂ ಹಬ್ಬುತ್ತ ಬಂತು. ಇದನ್ನು ಕೇಳಿ ಗಾಬರಿಗೊಂಡ ಧರ್ಮರಾಯನು ತಮ್ಮಂದಿರೆದುರಿಗೆ ದೈನ್ಯದಿಂದ ಕೃಷ್ಣನನ್ನು ಕುರಿತು "ಹೇ ಕೃಷ್ಣ, ಬಂಧುಗಳನ್ನೆಲ್ಲ ಕೊಂದು ಭೂಮಿಯನ್ನು ಗೆದ್ದು ತಾನೆ ಪ್ರಯೋಜನವೇನು? ಗೆಡ್ಡೆಗೆಣಸುಗಳೂ ನದಿಗಳೂ ತುಂಬಿರುವ ಕಾಡುಗಳು ನನ್ನ ಪಾಲಿಗೆ ಇದ್ದೇ ಇವೆಯಲ್ಲ! ಈ ಪ್ರಸಂಗದಲ್ಲಿ ಸರಿಯಾದ ದಾರಿಯನ್ನು ತೋರಿಸುವದಕ್ಕೆ ನಿನ್ನನ್ನು ಬಿಟ್ಟರೆ ನನಗೆ ಬೇರೆ ಗತಿ ಇಲ್ಲ. ಕಾಡುಗಿಚ್ಚಿನ ನಡುವೆ ಸಿಕ್ಕಿದ ಹೆಣ್ಣು ಜಿಂಕೆಗೆ ಮೋಡವನ್ನು ಬಿಟ್ಟರೆ ಬೇರೆ ಗತಿ ಯಾರು? ಬಹಳ ಮಾತಿನಿಂದೇನು! ಕುರುವಂಶದ ಹಳಿಗೆಗೆ ತಕ್ಕಂತೆ ನನ್ನ ಬಂಧುಗಳೊಡನೆ ಸಂಧಿಯನ್ನು ಮಾಡಿಸು" ಎಂದು ಹೇಳಿದನು. ಅದಕ್ಕೆ ಶ್ರೀಕೃಷ್ಣನು "ಧರ್ಮರಾಯನೆ, ನಿನ್ನ ಮಾತು ಮಹಾತ್ಮನಾದ ನಿನ್ನಂಥವರಿಗೆ ಒಪ್ಪತಕ್ಕದ್ದೇ ಸರಿ. ಭೀಷ್ಮನು ಎಷ್ಟು ತಿಳಿವಳಿಕೆಯನ್ನು ಹೇಳಿದರೂ ಆ ದುರ್ಯೋಧನನು ತನ್ನ ಕೆಟ್ಟ ಹಠವನ್ನು ಬಿಡಲೊಲ್ಲನು. ಆದ್ದರಿಂದ ಸಂಧಿಯು ಕೈಗೂಡುವ ಭರವಸೆ ನನಗೆ ಕಾಣುವದಿಲ್ಲ. ಆದರೂ ನಿನಗಾಗಿ ನಾನು ಪ್ರಯತ್ನಮಾಡುತ್ತೇನೆ. ಆಗುವದೂ ಬಿಡುವದೂ ಮಾಡುವವನ ಕೈಯೊಳಗಣ ಮಾತಲ್ಲ"– ಎಂದುತ್ತರವನ್ನಿತ್ತನು.

ನಂಬಿದವರನ್ನು ಬೆಂಬಿಡದಿರುವ ಶ್ರೀಕೃಷ್ಣನು ಧರ್ಮರಾಜನಿಗೆ ಹೀಗೆ ಹೇಳಿ ಭೀಮನನ್ನು ನೋಡಿ ನಗುತ್ತ ಹಸ್ತಿನಾಪುರಕ್ಕೆ ಪ್ರಯಾಣವನ್ನು ಮಾಡಿದನು. ಕೃಷ್ಣನು ಊರೊಳಗೆ ಬರುತ್ತಿರುವಾಗ ಜನರೆಲ್ಲರೂ ದಟ್ಟವಾಗಿ ನೆರೆದು ನೋಡುತ್ತಿದ್ದರು. ಕೃಷ್ಣನು ದಾರಿಯುದ್ದಕ್ಕೆ ಎಲ್ಲರನ್ನೂ ನೋಡುತ್ತ ನೆಟ್ಟಗೆ ವಿದುರನ ಮನೆಗೆ ಹೋದನು.

ಕೃಷ್ಣನು ಮನೆಗೆ ಬರುತ್ತಲೆ ಆ ಆನಂದದ ಭರದಲ್ಲಿ ವಿದುರನು ಕುಣಿದಾಡಿದನು. ಸಾಯಂಕಾಲದ ಸಂಧ್ಯಾವಂದನೆ ಮೊದಲಾದವುಗಳನ್ನು ಮುಗಿಸಿಕೊಂಡು ಕೃಷ್ಣನು ಕುಂತಿಯ ಬಳಿಗೆ ಬಂದನು. ಕೃಷ್ಣನಿಗೆ ಅಲ್ಲಿಯೇ ಆ ರಾತ್ರಿಯೆಲ್ಲ ಮುಗಿಯಿತಾದರೂ ಕುಂತಿಯೊಡನೆ ಮಾತುಕಥೆಗಳು ಮುಗಿಯಲಿಲ್ಲ.

ಬೆಳಕು ಹರಿಯಿತು. ನಕ್ಷತ್ರಗಳಂತೆ ದೀಪಗಳು ಕಳೆಗೆಟ್ಟುವು. ಜನರು ರಾಜನ ಅರಮನೆಯಿಂದ ವಿದುರನ ಮನೆಗೆ ಬಂದು ಹೋಗುವದಕ್ಕಾರಂಭಿಸಿದರು. ಸೂರ್ಯನು ಉದಯಪರ್ವತದ ಶಿಖರದ ಮೇಲೇಳುವಂತೆ ಶ್ರೀಕೃಷ್ಣನು ಮಂಚದ ಮೇಲಿನಿಂದ ಎದ್ದನು. ಮತ್ತು ಬೆಳಗಿನಲ್ಲಿ ಮಾಡತಕ್ಕ ಕೆಲಸಗಳನ್ನೆಲ್ಲ ತೀರಿಸಿ ಆಮೇಲೆ ವಿದುರನ ಕೈಯನ್ನು ಹಿಡಿದುಕೊಂಡು ಮೆಲ್ಲಗೆ ಮನೆಯಿಂದ ಹೊರಟನು. ಕುಂಕುಮಕೇಸರಿಯಿಂದ ಕೂಡಿದ ಗಂಧವನ್ನು ಹಚ್ಚಿಕೊಂಡಿದ್ದ ಕೃಷ್ಣನು ಎಳೆಬಿಸಿಲಿನಿಂದ ಕೂಡಿದ ಮೇಘದಂತೆ ಬೆಳಗುತ್ತಿದ್ದನು. ಅವನ ಪೀತಾಂಬರವು ಕಾಲ ತುದಿಗೆ ತಾಕುತ್ತಿತ್ತು. ದುರ್ಯೋಧನ, ಭೀಷ್ಮ- ಮೊದಲಾದವರು ಎದುರಿಗೆ ಬಂದು ಯೋಗಕ್ಷೇಮವನ್ನು ಕೇಳಿ ಒಳಕ್ಕೆ ಕರೆದರು. ಲೆಕ್ಕವಿಲ್ಲದಷ್ಟು ಸೇನಾನಾಯಕರು ಕೃಷ್ಣನಿಗೆ ವಿನಯದಿಂದ ಕೈ ಮುಗಿದರು. ಹೊಗಳುವ ಭಟ್ಟರು ಮುಂದೆ ನಿಂತು ಕಂಸ ಮೊದಲಾದವರನ್ನು ಗೆದ್ದದ್ದೇ ಮೊದಲಾದ ಬಿರುದಾವಳಿಗಳನ್ನೆಲ್ಲ ಹೊಗಳಿದರು. ಮೋಡವಿಲ್ಲದ ಕಡೆ ಹೊಳೆಯುತ್ತಿರುವ ಮಿಂಚಿನಂತೆ ಬೆಳಕು ಬೀರುತ್ತಿದ್ದ ಬಂಗಾರದ ಕೋಲಿನವರು ಕೃಷ್ಣನಿಗೆ ದಾರಿಯನ್ನು ಬಿಡಿಸಿದರು. ದುರ್ಯೋಧನ, ದುಃಶಾಸನ, ಶಕುನಿ, ಕರ್ಣ- ಈ ನಾಲ್ವರೂ ಮೊದಲೇ ಕುಳಿತಿದ್ದ ಸಭಾಮಂಟಪಕ್ಕೆ ಕೃಷ್ಣನು ಬಂದು ಮುಟ್ಟಿದನು.

ಕೃಷ್ಣನು ಬಾಗಿಲಿಗೆ ಬರುತ್ತಲೆ ದುರ್ಯೋಧನನು ತನ್ನ ಸಿಂಹಾಸನದಿಂದೆದ್ದನು. ಸಮಸ್ತರೂ ಎದ್ದು ಗೌರವವನ್ನು ತೋರಿಸಿದರು. ಕೃಷ್ಣನಿಗಾಗಿಯೇ ಒಂದು ಎತ್ತರವಾದ ಪೀಠವೇರ್ಪಟ್ಟಿತ್ತು. ಕೃಷ್ಣನು

ಅವರ ಮೇಲೆ ಕುಳಿತುಕೊಂಡನು. ಪುರೋಹಿತರು ಬಂದು ಅವನಿಗೆ ಪೂಜೆಯನ್ನು ಮಾಡಿದರು. ಆ ಸಮಯದಲ್ಲಿ ಕೃಷ್ಣನನ್ನು ನೋಡಿದಾಗ ದುರ್ಯೋಧನನ ಹೊರತು ಎಲ್ಲರೂ ಹಿರಿಹಿರಿ ಹಿಗ್ಗಿದರು. ಶ್ರೀಕೃಷ್ಣನು ತನ್ನ ರತ್ನಸಿಂಹಾಸನದಿಂದ ಕೆಳಕ್ಕೆ ಚಾಚಿದ್ದ ಕಾಲನ್ನು ವಿದುರನು ಒತ್ತುತ್ತಿದ್ದನು. ಆಗ ಎಲ್ಲರಿಗೂ ಕೇಳುವಂತೆ ಕೃಷ್ಣನು ಧೃತರಾಷ್ಟ್ರನನ್ನು ಕುರಿತು "ಎಲೈ ರಾಜನೆ, ಇನ್ನು ಸ್ವಲ್ಪ ದಿನಗಳಲ್ಲಿಯೇ ಚಂದ್ರವಂಶದ ಹೆಸರು ಕೂಡ ಅಳಿದು ಹೋಗುವ ಭವಿಷ್ಯವನ್ನರಿತು ಸಾಧ್ಯವಾದರೆ ಅದನ್ನು ತಪ್ಪಿಸುವದಕ್ಕೆ ಪ್ರಯತ್ನಮಾಡಿ ನೋಡೋಣವೆಂದು ನಾನು ನಿನ್ನ ಬಳಿಗೆ ಬಂದಿದ್ದೇನೆ. ಆ ಭವಿಷ್ಯವನ್ನು ಸುಳ್ಳು ಮಾಡುವದಕ್ಕೆ ಪಾಂಡವರಿಗೂ ನಿನ್ನ ಮಕ್ಕಳಿಗೂ ಸಂಧಿಯಾಗುವದೊಂದೇ ಉಪಾಯ. ಆದ್ದರಿಂದ ಮುಂದೆ ಒಳ್ಳೆಯದಾಗಬೇಕೆಂದು ಬಯಸುವದಾದರೆ ಪಾಂಡವರನ್ನು ನಿನ್ನ ನೂರು ಮಕ್ಕಳೊಡನೆ ಸೇರಿಸಿಕೊ. ನಿನ್ನ ತೊಡೆಯ ಮೇಲೆ ಬೆಳೆದ ಅವರು ನಿನ್ನ ಮಾತನ್ನು ತಲೆಯ ಮೇಲೆ ಹೊತ್ತು ವನವಾಸದ ಪ್ರತಿಜ್ಞೆಯನ್ನು ಮುಗಿಸಿದ್ದಾರೆ. ಈಗ ಅವರನ್ನು ಭೂಮಿಯನ್ನಾಳುವದಕ್ಕಿರಿಸುವದೂ ಅಥವಾ ಕಾಡಿನಲ್ಲಿರಿಸುವದೂ ನಿನ್ನ ಕೈಯಲ್ಲಿದೆ "– ಎಂದು ಹೇಳಿದನು.

ಇದನ್ನು ಕೇಳಿ ಧೃತರಾಷ್ಟ್ರನು ನಿಟ್ಟುಸಿರಿಟ್ಟು "ಹೇ ಕೃಷ್ಣ, ಕೆಟ್ಟ ದಾರಿಯನ್ನು ತುಳಿಯಬೇಡವೆಂದು ದುರ್ಯೋಧನನಿಗೆ ನಾನು ಎಷ್ಟೋ ಹೇಳಿದೆನು. ನನ್ನ ತಾಯಿಯು ವ್ಯಾಸರ ತೇಜಸ್ಸನ್ನು ನೋಡಲಾರದೆ ಕಣ್ಣುಮುಚ್ಚಿಕೊಂಡದ್ದರ ಫಲವಾಗಿ ನಾನು ಕುರುಡನಾಗಿ ಹುಟ್ಟಿರುವದು ಈ ಮೂರ್ಖನಾದ ಮಗನ ಮುಖವನ್ನು ನೋಡದಿರುವದಕ್ಕನುಕೂಲವಾಯಿತೆಂದು ತಿಳಿಯುತ್ತೇನೆ. ಈ ನನ್ನ ಮಗನು ತಾನೂ ತಿಳಿದುಕೊಳ್ಳುವದಿಲ್ಲ; ಹಿರಿಯರ ಮಾತಿಗೂ ಕಿವಿಗೊಡುವದಿಲ್ಲ. ಹೇ ಕೃಷ್ಣ, ನಮ್ಮ ವಂಶದ ಮೊಳಕೆ ಏಳಿಗೆಯನ್ನು ಹೊಂದಬೇಕಾದರೇನು ಮಾಡಬೇಕೊ ನೀನೇ ತಿಳಿದು ಮಾಡು "– ಎಂದು ಕೈಮುಗಿದು ನುಡಿದನು.

ಆಗ ಕೃಷ್ಣನು ತನ್ನ ಪೀಠದ ಮೇಲೆ ಕೈ ಊರಿದ್ದಪ್ಪರಿಂದ ಅವನ ಎಡಗಡೆಯ ಹೆಗಲು ಸ್ವಲ್ಪ ಮೇಲಕ್ಕೆದ್ದಿತ್ತು. ಕುಂಡಲಗಳ ಹೊಳಪು ಕೆನ್ನೆಯ ಮೇಲೆ ಬೀಳಗುವಂತೆಯೂ ನಡುವಿಗೆ ಕಟ್ಟಿದ್ದ ಪೀತಾಂಬರದ ಅಲುಗುವಿಕೆಯಿಂದ ಮರ್ಮರಶಬ್ದವಾಗುವಂತೆಯೂ ಕೃಷ್ಣನು ತನ್ನ ಕುತ್ತಿಗೆಯನ್ನು ಸ್ವಲ್ಪ ದುರ್ಯೋಧನನ ಕಡೆಗೆ ತಿರುಗಿಸಿದನು. ಆಗ ಅವನ ಹತ್ತಿರ ಕರ್ಣನು ನಗುತ್ತಿದ್ದನು ಮತ್ತು ದುಃಶಾಸನನು ಸಂಧಿಗೆ ಒಪ್ಪದೆ ಇರುವ ಮುಖಭಾವವನ್ನು ಹೊಂದಿದ್ದನು. ಕರ್ಣನ ಕಿವಿಯ ಹತ್ತಿರ ಶಕುನಿಯು ಪಿಸುಗುಟ್ಟುತ್ತಿದ್ದನು. ಈ ಪರಿವಾರದಿಂದ ಕೂಡಿದ ದುರ್ಯೋಧನನನ್ನು ಕುರಿತು ಕೃಷ್ಣನು "ಹೇ ದುರ್ಯೋಧನ, ಪಾಂಡವರಿಗೆ ಅವರ ಪಾಲಿನ ನೆಲವನ್ನು ಕೊಟ್ಟು ಬಿಡೆಂದು ಹೇಳುವ ತಂದೆಯ ಮಾತನ್ನು ಕಿವಿಗೆ ಹಾಕಿಕೊಳ್ಳದಿರುವ ನಿನ್ನಂಥವನು ಚಂದ್ರವಂಶದಲ್ಲಿ ಹೇಗೆ ಹುಟ್ಟಿದೆ? ನಿಮ್ಮ ಪೂರ್ವಿಕನಾದ 'ಪೂರು' ಎಂಬುವನು ತನ್ನ ತಂದೆಯ ಮುಪ್ಪನ್ನು ತಾನು ತೆಗೆದುಕೊಂಡು ತನ್ನ ಹೊಸ ಹರೆಯವನ್ನು ತಂದೆಗೆ ಧಾರೆಯೆರೆದನು. ಬಹಳ ಹಿಂದಿನ ಮಾತೇಕೆ? ಕೆಚ್ಚೆದೆಯಲ್ಲಿ ಈಡಿಲ್ಲದ ಭೀಷ್ಮನು ತನ್ನ ತಂದೆಯ ಹಿತಕ್ಕಾಗಿ ಗೃಹಸ್ಥಾಶ್ರಮವನ್ನೇ ತೊರೆದಿಲ್ಲವೆ? ಹೇ ಕೌರವ, ಜೂಜಿನಲ್ಲಿ ಗಟ್ಟಿಗನಾದ ಈ ಶಕುನಿಯ ಪಿಸುಮಾತುಗಳನ್ನು ಕೇಳಿ ನೀನು ಪಾಂಡವರದೆಂಬುದನ್ನೆಲ್ಲ ಎತ್ತಿಹಾಕಬೇಕೆಂದಿರುವೆಯಷ್ಟೆ. ಇಂದ್ರನ ಮಗನಾದ ಅರ್ಜುನನು ಈಶ್ವರನ ತಲೆಯ ಮೇಲೆ ತನ್ನ ಬಿಲ್ಲಿನ ಮುದ್ರೆಯನ್ನೊತ್ತಿದ್ದು ದಕ್ಕದಿದ್ದರೆ ನಿನ್ನ ಉದ್ದೇಶವು ನೆರವೇರಬಹುದಾಗಿತ್ತು. ಎಲೊ ಕೌರವ, ನೀನು ಹಿರಿಯರ ಮಾತನ್ನು ಕಡೆಗಾಣುವದು ನಿನ್ನ ತಪ್ಪಲ್ಲ; ಗಂಧರ್ವನಿಂದಾದ ಬಿಗಿತವನ್ನು ಬಿಡಿಸಿದ ಪಾಂಡವರದೇ ತಪ್ಪು"—ಎಂದನು.

ಇದನ್ನು ಕೇಳಿದ ದುರ್ಯೋಧನನು ಕೋಪಗೊಂಡು "ಎಲೊ ನಂದನ ಮಗನೆ, ವಿರಾಟನ ಮಗನ ಮತ್ತು ಮಗಳ ಮೆಚ್ಚುಗೆಯನ್ನು ಪಡೆದು ಮೆರೆಯುವ ಪಾಂಡವರಿಗೂ ಎಲ್ಲೆಲ್ಲಿ ನೋಡಿದರೂ ಕೈ

ಮುಗಿದು ಬಿನ್ನಯಿಸುತ್ತಿರುವ ಅರಸರ ಕಡೆಗೆ ಕಣ್ಣುಹಾಕುವದಕ್ಕೂ ಸಮಯವಿಲ್ಲದಿರುವ ನಮಗೂ ಸಂಧಿಯೆಂದರೇನು! ನಿನ್ನ ನಡುವಣ ತನವಾದರೂ ಏನು!! ನಾನು ಕೊಡುವದಾದರೂ ಏನು!!! ಈ ಸಾಗವ ಕೆಲಸಕ್ಕೆ ಬಂದ ನೀನು ಬಂದ ದಾರಿಯನ್ನು ಹಿಡಿ" ಎಂದು ಗರ್ಜಿಸಿದನು. ಈ ಮಾತನ್ನು ಕೇಳಿ ಧೃತರಾಷ್ಟ್ರನು ಹೆದರಿ ಎರಡು ಕಿವಿಗಳನ್ನೂ ಕೈಗಳಿಂದ ಮುಚ್ಚಿಕೊಂಡು ತಲೆಯನ್ನು ತಗ್ಗಿಸಿಕೊಂಡನು. ದುರ್ಯೋಧನನು ಕೃಷ್ಣನನ್ನು ಹುಲ್ಲಿಗಿಂತ ಕಡೆಯಾಗಿ ಕಂಡು ಸಭೆಯಿಂದೆದ್ದು ಮಾರುಗಾಲುಗಳನ್ನು ಹಾಕಿಕೊಂಡು ಹೋಗಿಬಿಟ್ಟನು. ಒಳಗೆ ಕೋಪವು ಉಕ್ಕಿ ಬಂದರೂ ಕೃಷ್ಣನು ನಗುವಿನಿಂದ ತುಟಿಯನ್ನಲ್ಲಾಡಿಸುತ್ತ ಆ ದುರ್ಯೋಧನನ ಸೊಕ್ಕಿನ ಮಾತಿನಿಂದ ತಳಮಳಗೊಂಡ ಜನರನ್ನೆಲ್ಲ ನೋಡಿ "ಎಲೈ ಸಭಿಕರೆ, ಧೃತರಾಷ್ಟ್ರನಿಂದೇನಾಗಬೇಕು? ಭೀಷ್ಮನಿಂದ ತಾನೆ ಏನಾಗಬೇಕು? ಆಳುತನದಲ್ಲಿರುವ ನನ್ನಿಂದಾದರೂ ಏನು? ಭೀಮನ ಗದೆಯೇ ಧರ್ಮರಾಯನಿಗೆ ಭೂಮಿಯನ್ನೆಲ್ಲ ಕೊಡಿಸಬಲ್ಲದು" ಎಂದು ಒತ್ತಿ ಹೇಳಿದನು. ಶ್ರೀಕೃಷ್ಣನ ಆ ಮಾತನ್ನು ಕೇಳಿ ಸಭೆಯವರ ಮನಸ್ಸು ತಲ್ಲಣಗೊಂಡಿತು. ಎಲ್ಲರೂ ತುಟಿಗಳನ್ನು ಹೊಲಿದುಕೊಂಡಿದ್ದರು. ಹೊರಗೆ ಹೋದ ದುರ್ಯೋಧನನು ಬಹು ಸೊಕ್ಕಿನವರಾದ ಕರ್ಣ, ಶಕುನಿ, ದುಃಶಾಸನ— ಈ ಮೂವರೊಡನೆ ಕಿವಿಮಾತುಗಳನ್ನಾಡಿ ಗಂಧರ್ವನಿಂದ ತನಗಾದ ಬಿಗಿತವನ್ನು ಕೃಷ್ಣನ ಮೈಮೇಲಕ್ಕೆ ದಾಟಿಸಬೇಕೆಂದು ಸಂಚುನಡೆಸಿದನು.

## ವಿರಾಡ್ರೂಪ

ಯಾವ ಪರಮಾತ್ಮನು ತಾನೆ ಮಾಯೆಯಿಂದ ಜಗತ್ತಾಗಿರುವನೊ ಆ ಶ್ರೀಕೃಷ್ಣನು ದುರ್ಯೋಧನನ ಕೆಟ್ಟಹಂಚಿಕೆಯನ್ನು ಕೇಳಿ ರೇಗಿ ಸಭಿಕರಿಗೆಲ್ಲ ದಿಗ್ಭ್ರಮೆಯುಂಟಾಗುವಂತೆ ತನ್ನ ವಿರಾಡ್ರೂಪವನ್ನು ಪ್ರಕಟಮಾಡಿದನು. ಕನ್ನಡಿಯ ಪೆಟ್ಟಿಗೆಯಲ್ಲಿ ಒಳಗಿರುವ ಆಭರಣಗಳೆಲ್ಲ ಕಾಣುವಂತೆ ಆಗ ಕೃಷ್ಣನ ಹೊಟ್ಟೆಯಲ್ಲಿ ನಕ್ಷತ್ರಗಳೂ ಬೆಟ್ಟಗಳೂ ಗ್ರಹ

ಗಳೂ ಕಾಡುಗಳೂ ಸಮುದ್ರಗಳೂ ನದಿಗಳೂ ಎಲ್ಲವೂ ಕಣ್ಣಿಗೆ ಕಟ್ಟಿದ ಹಾಗೆ ಕಾಣುವದಕ್ಕೆ ಮೊದಲಾದವು. ಅದನ್ನು ನೋಡಿ ಸಿದ್ಧರೂ ವಿದ್ಯಾಧರದೇವತೆಗಳೂ ಬೆರಗಾಗಿ ಹೂಮಳೆಗರೆದರು. ಬಹುಕಾಲದಿಂದ ಪರಮಾತ್ಮನ ಸ್ವರೂಪವನ್ನು ನೋಡಲಪೇಕ್ಷಿಸುತ್ತಿದ್ದ ಮುನಿಜನಗಳು ಅಂದು ಕೃತಾರ್ಥರಾದರು. ಭೀಷ್ಮನ ಕಣ್ಣಿಂದ ಹರ್ಷದ ನೀರು ಧಾರೆಯಾಗಿ ಸುರಿಯಿತು. ವಿದುರನು ಕಣ್ಣುರೆಪ್ಪೆಗಳನ್ನು ಮುಚ್ಚಲೇ ಇಲ್ಲ. ಹಸ್ತಿನಾವತಿಯ ಜನರೆಲ್ಲರೂ ದುರ್ಯೋಧನನ ಮೇಲಿನ ಪ್ರೇಮವನ್ನು ಕಿತ್ತೊಗೆದರು. ಅವನ ಅಟ್ಟಹಾಸದ ಒಂದಾರ್ಭಟವು ಎಂಟು ದಿಕ್ಕುಗಳಲ್ಲಿಯೂ ತುಂಬಿತು. ಶ್ರೀಕೃಷ್ಣನ ಅನುಗ್ರಹದಿಂದ ಧೃತರಾಷ್ಟ್ರನಿಗೂ ಸ್ವಲ್ಪ ಹೊತ್ತು ಈ ನೋಟವು ಕಾಣಬಂದು ಮಾಯವಾಯಿತು. ಭಯಂಕರವಾದ ವಿರಾಡ್ರೂಪವನ್ನಡಗಿಸಿಕೊಳ್ಳಬೇಕೆಂದು ಭೀಷ್ಮನೇ ಮೊದಲಾದವರು ಅಂಗಲಾಚಿಕೊಂಡರು. ಆಗ ಕೃಷ್ಣನು ಕಣ್ಣುಗಳಿಗೆ ಹಬ್ಬವನ್ನುಂಟುಮಾಡುವ ಗೋಪಸ್ತ್ರೀಮನೋಹರವಾದ ರೂಪವನ್ನು ತಾಳಿದನು.

ಆಗ ಅವನ ಮಹಿಮೆಯನ್ನು ನೋಡಿ ಧನ್ಯರಾದ ಮುನಿಗಳು ಶಾಂತಮೂರ್ತಿಯಾದ ಅವನನ್ನು ಕುರಿತು “ಎಲೈ ಭಗವಂತನೆ, ಮಹಾತ್ಮರಾದ ಯೋಗಿಗಳು ಕೂಡ ತಿಳಿಯಲಾಗದ ನಿನಗೆ ಎರಗುತ್ತೇವೆ. ನೀನು ಮೀನಾಗಿ ವೇದವನ್ನು ಹುಡುಕಿ ತಂದೆ; ಆಮೆಯಾಗಿ ಮಂದರಪರ್ವತಕ್ಕೆ ಬೆನ್ನುಕೊಟ್ಟು ಕ್ಷೀರಸಮುದ್ರದ ಕಡೆತದಿಂದ ಅಮೃತವು ಹೊರಟು ದೇವತೆಗಳಿಗೆ ದಕ್ಕುವಂತೆ ಮಾಡಿದೆ; ಹಂದಿಯಾಗಿ ಭೂಮಿಯನ್ನು ಸಮುದ್ರದ ತಳದಿಂದ ಎತ್ತಿ ತಂದೆ; ನರಸಿಂಹನಾಗಿ ಹಿರಣ್ಯಕಶಿಪುವೆಂಬ ರಾಕ್ಷಸನ ಎದೆಯನ್ನು ಸೀಳಿದೆ : ಕುಳ್ಳನಾದ ಹಾರವನಾಗಿ ಮೂರು ಹೆಜ್ಜೆ ನೆಲವನ್ನು ಬೇಡಿ ಬಲಿಚಕ್ರವರ್ತಿಯನ್ನು ಪಾತಾಲಕ್ಕೆ ತುಳಿದೆ; ಪರಶುರಾಮನಾಗಿ ಜಗತ್ತನ್ನೆಲ್ಲ ಇಪ್ಪತ್ತೊಂದಾವರ್ತಿ ಸುತ್ತಿ ಕ್ಷತ್ರಿಯರ ಸೆಲೆ ಇಲ್ಲದಂತೆ ಮಾಡಿದೆ : ರಾಮನಾಗಿ ನೀನು ನಿನ್ನ ಪಾದಧೂಳಿಯನ್ನು ತಾಕಿಸುವದರಿಂದ ಅಹಲ್ಯ

ದೇವಿಯ ಶಾಪವನ್ನು ನೀಗಿದೆ; ಈಶ್ವರನ ಧನುಸ್ಸನ್ನು ಮುರಿದೆ; ಸಮುದ್ರಕ್ಕೆ ಸೇತುವನ್ನು ಕಟ್ಟಿದೆ; ರಾವಣನನ್ನು ಕೊಂದು ವಿಭೀಷಣನನ್ನು ರಾಜನನ್ನಾಗಿ ಮಾಡಿದೆ; ಈಗ ಕೃಷ್ಣನಾಗಿ ಪೂತನಿಯ ಮೊಲೆಹಾಲಿನ ಜೊತೆಗೆ ಅವಳ ಪ್ರಾಣವನ್ನು ನಂಚಿಕೊಂಡೆ; ಸತ್ಯಭಾಮೆಯನ್ನು ಉಲ್ಲಾಸಗೊಳಿಸುವದಕ್ಕಾಗಿ ಇಂದ್ರನ ನಂದನವನವನ್ನೆ ಭೂಲೆಬ್ಬಿಸಿದೆ"— ಎಂದು ಕೊಂಡಾಡಿದರು. ಇದರಿಂದ ಶ್ರೀಕೃಷ್ಣನು ಸಂತುಷ್ಟನಾಗಿ ಮೇರುಪರ್ವತದ ಮೇಲಿನಿಂದ ಒಂದು ಮೋಡವೇಳುವಂತೆ ತನ್ನ ಪೀಠದಿಂದ ಎದ್ದು ಭೀಷ್ಮನನ್ನು ಆಲಿಂಗಿಸಿ ಧೃತರಾಷ್ಟ್ರನ ತಲೆಯನ್ನು ಸವರಿ ವಿದುರನ ಮುಂದಲೆಯನ್ನು ಮೂಸಿ ಎಲ್ಲರಿಗೂ ಹೋಗಿ ಬರುತ್ತೇನೆಂದು ಹೇಳಿ ತೇರನ್ನು ಹತ್ತಿ ವಿರಾಟನಗರದ ದಾರಿಯನ್ನು ಹಿಡಿದನು. ಧರ್ಮರಾಯ ಮೊದಲಾದವರು ಕೃಷ್ಣನಿಂದ ಹಸ್ತಿನಾಪುರದಲ್ಲಿ ನಡೆದ ಸುದ್ದಿಯನ್ನೆಲ್ಲ ಕೇಳಿ ತಮ್ಮ ಆಯುಧಗಳನ್ನೆಲ್ಲ ಸಂಪ್ರದಾಯದಂತೆ ಪೂಜಿಸಿದರು.

ಆಮೇಲೊಂದು ದಿನ ಕುಂತಿಯು ತಾನೊಂದು ಕಾರ್ಯವನ್ನು ಸಾಧಿಸಬೇಕೆಂದು ತನ್ನ ಮಗನಾದ ಕರ್ಣನನ್ನು ಹುಡುಕಿಕೊಂಡು ಬಂದಳು. ಕರ್ಣನು ಆಗ ಯಮುನಾನದಿಯ ದಡದಲ್ಲಿ ತಪಸ್ಸು ಮಾಡುತ್ತಿದ್ದನು. ತಾಯಿಯು ತನ್ನ ಹತ್ತಿರಕ್ಕೆ ಬಂದದ್ದು ಅವನಿಗೆ ತಿಳಿಯಲೇ ಇಲ್ಲ. ತನಗೆ ಹುಟ್ಟಿದಾಗಲೆ ಬಂದಿದ್ದ ಕವಚವನ್ನು ಕೂಡ ಇಂದ್ರನಿಗೆ ಕಿತ್ತುಕೊಟ್ಟ ತನ್ನ ಮಗನ ಮೇಲೆ ಕುಂತಿಯು ತನ್ನ ದೃಷ್ಟಿಯನ್ನು ಹಾಕಿದಳು. ತಪಸ್ಸು ಮುಗಿದು ಜಪಮಾಲೆಯನ್ನು ಕಿವಿಗೆ ತೂಗಹಾಕಿದ ಮೇಲೆ ಕರ್ಣನು ಅವಳನ್ನು ನೋಡಿ ಕಾಲಿಗೆರಗಿದನು. ಕುಂತಿಯು ಅವನನ್ನು ಹರಸಿ ಬಾಚಿ ತಬ್ಬಿಕೊಂಡು "ಮಗುವೆ, ಬೇಡುವವರ ಭಾಗ್ಯದ ಗಣಿಯಾದ ನೀನು ಸೂರ್ಯನ ಅನುಗ್ರಹದಿಂದ ನನ್ನಲ್ಲಿ ಹುಟ್ಟಿದೆ. ನಿನ್ನನ್ನು ಚಿಕ್ಕಂದಿನಿಂದಲೂ ಸಾಕಿದ ರಾಧೆಯೂ ಅವಳ ಗಂಡನೂ ನಿನ್ನನ್ನು ಹಡೆದವರಲ್ಲ. ಆದ್ದರಿಂದ ನಾನು ರಾಧೆಯ ಮಗನೆಂಬುದನ್ನೂ ದುರ್ಯೋಧನನ ಗೆಳೆತನವನ್ನೂ ಬಿಟ್ಟುಬಿಡು. ಧರ್ಮ

ರಾಯನೇ ಮೊದಲಾದ ತಮ್ಮಂದಿರನ್ನು ನನ್ನ ಮಾತಿನಿಂದ ನಿನ್ನವರ
ನ್ನಾಗಿ ತಿಳಿ. ಕೇಳಿದೊಡನೆಯೇ ಯಾವನಿಗೂ ಹಿನ್ನೊ ನೋಡದೆ ಹುಟ್ಟು
ಕವಚವನ್ನು ಕಿತ್ತುಕೊಟ್ಟಂಥ ನೀನು ತಾಯ ಮಾತನ್ನು ನಡೆಸುವ ವಿಷ
ಯದಲ್ಲಿ ಹಿಂದುಮುಂದು ನೋಡಬೇಡ. ಹಿರಿಯರ ಮಾತನ್ನು ಕಿವಿಯ
ಮೇಲೆ ಹಾಕಿಕೊಳ್ಳದವರು ಜನರೆಲ್ಲರ ಛೀಗುಟ್ಟುವಿಕೆಗೆ ಗುರಿಯಾಗು
ವರು"— ಎಂದು ಹೇಳಿದಳು. ಆಗ ಅವನು ಕೈಮುಗಿದುಕೊಂಡು
"ಎಲೈ ತಾಯಿಯೆ, ದುರ್ಯೋಧನನು ನನಗೊಂದು ದೇಶವನ್ನೇ
ಕೊಟ್ಟು ನನ್ನೊಡನೆ ಗೆಳೆಯತನವನ್ನು ಬೆಳೆಸಿದ್ದಾನೆ. ಅಂಥ ಗೆಳೆಯ
ತನವನ್ನು ಕಡೆಗಾಣುವುದು ಒಪ್ಪಿತೇ? ಮಾಡಿದ ಉಪಕಾರವನ್ನು
ಮರೆಯುವುದೇ ಪರಲೋಕದ ದಾರಿಯ ಅಡ್ಡಮರವೆಂದು ದೊಡ್ಡವರು
ಹೇಳುತ್ತಾರೆ. ದಯವಿಟ್ಟು ನೀನು ನನಗೆ ಆ ಮಾತೊಂದನ್ನು ಹೇಳ
ಬೇಡ"— ಎಂದು ಉತ್ತರವನ್ನು ಕೊಟ್ಟುಬಿಟ್ಟನು. ಕರ್ಣನ ಮನಸ್ಸು
ದುರ್ಯೋಧನನಿಂದೇನೂ ಹಿಂದಿರುಗಲಿಲ್ಲ. ಕುಂತಿಯು ಮಾತ್ರ ಬಂದ
ದಾರಿಗೆ ಸುಂಕವಿಲ್ಲದೆ ಹಿಂದಿರುಗಿದಳು.

## ದುರ್ಯೋಧನನಿಗೆ ಭೀಷ್ಮನ ಬೆಂಬಲ

ಇಷ್ಟಾಗುತ್ತಲೆ ಕೌರವರೂ ಪಾಂಡವರೂ ತಮ್ಮ ತಮ್ಮ ಸೇನೆ
ಯನ್ನೆಲ್ಲ ಒಟ್ಟುಗೂಡಿಸಿಕೊಂಡು ಕುರುಕ್ಷೇತ್ರಕ್ಕೆ ಕಾಲಿಟ್ಟರು. ಅಲ್ಲಿದ್ದ
ಹಿರಣ್ವತೀನದಿಯ ನೀರೆಲ್ಲ ಆನೆಗಳ ಸೊಕ್ಕಿನ ನೀರಿನಿಂದ ಸುವಾಸನೆ
ಯುಳ್ಳದ್ದಾಯಿತು. ಹರಿತವಾದ ಗೊರಸುಗಳುಳ್ಳ ಕುದುರೆಗಳ ತುಳಿತ
ದಿಂದ ನೆಲವೆಲ್ಲ ಧೂಳೆದ್ದಿತು. ಪತಾಕೆಗಳು ಮೇಘಮಂಡಲವನ್ನು
ತೂರಿ ಹಾಯ್ದುವು. ರಾಜರ ಬಿಟ್ಟಿಯ ಮನೆಗಳು ಎಲ್ಲೆಲ್ಲಿಯೂ
ಮುಗಿಲು ಮುಟ್ಟುತ್ತ ಕಂಗೊಳಿಸಿದವು. ಸ್ವಲ್ಪ ಹೊತ್ತಿನಲ್ಲಿಯೇ
ಸವೆದ ದಾರಿಗಳು ಎಲ್ಲೆಲ್ಲಿಯೂ ಕಾಣಬಂದವು. ಅಂಗಡಿಗಳಲ್ಲಿ
ಕೊಂಡುಕೊಳ್ಳುವವರ ನೂಕುನುಗ್ಗಲು ಹೇಳದಷ್ಟಾಯಿತು. ಆಯುಧ
ಗಳನ್ನು ಸರಿಪಡಿಸುವವರ ಮತ್ತು ಬೇರೆ ಬೇರೆ ಕೆಲಸಗಾರರ ಮನೆ

ಗಳೂ ಸೇರಿ ಅದು ಮತ್ತೊಂದು ಹಸ್ತಿನಾಪಟ್ಟಣವೇ ಆಯಿತು. ದುರ್ಯೋಧನನು ದಂಡಿಗೆಲ್ಲ ಒಡೆಯನಾಗೆಂದು ಭೀಷ್ಮನಿಗೆರಗಿ ಬೇಡಿಕೊಂಡನು. ಅರಿಗಳಿಗೆಯಲ್ಲಿ ಹಗೆಗಳನ್ನು ಸ್ವರ್ಗದ ಬಿಡಾರದಲ್ಲಿರಿಸುವೆನೆಂದು ಉಬ್ಬಟೆಯ ಮಾತಾಡಿ ಭೀಷ್ಮನು ಸೇನಾಪತಿತ್ವದ ಪಟ್ಟವನ್ನು ಕಟ್ಟಿಸಿಕೊಂಡನು.

ಅತ್ತ ಪಾಂಡವರು ಧೃಷ್ಟದ್ಯುಮ್ನನನ್ನು ತಮ್ಮ ದಂಡಿನ ಒಡೆಯನನ್ನಾಗಿ ಮಾಡಿದರು. ಆಮೇಲೊಮ್ಮೆ ಮಹಾರಥರನ್ನೆಲ್ಲ ಎಣಿಕೆಗೆ ತೆಗೆದುಕೊಳ್ಳುವ ಸಡಗರದಲ್ಲಿ ಭೀಷ್ಮನು ಕರ್ಣನನ್ನು ಕೆಳಗಣ ಮೆಟ್ಟಲಿನಲ್ಲಿರುವ ಅರ್ಧರಥನೆಂದು ಹೇಳಿ ಕೈಬಿಟ್ಟದ್ದರಿಂದ ತನ್ನ ಯೋಗ್ಯತೆಗೆ ಅಪಮಾನವಾಯಿತೆಂದು ರೋಷಗೊಂಡು ಭೀಷ್ಮನು ಬದುಕಿರುವವರೆಗೆ ತಾನು ಆಯುಧವನ್ನು ಹಿಡಿಯುವದಿಲ್ಲವೆಂದು ಕರ್ಣನು ಆಣೆಯನ್ನು ತೊಟ್ಟನು. ಈ ಮಾತನ್ನು ಕೇಳಿ ದುಃಖಗೊಂಡ ದುರ್ಯೋಧನನನ್ನು ನೋಡಿ ಭೀಷ್ಮನು ತಾನು ಹಗೆಗಳ ಹುಟ್ಟಡಗಿಸಿಕೊಡುತ್ತೇನೆಂದು ಅವನಿಗೆ ಸಮಾಧಾನವನ್ನು ಹೇಳಿದನು.

## ಯುದ್ಧದ ಸಾಮಾನ್ಯವರ್ಣನೆ

ಕೌರವರ ದಂಡಿನಲ್ಲಿ ಭೀಷ್ಮನೂ ಪಾಂಡವರ ದಂಡಿನಲ್ಲಿ ಧೃಷ್ಟದ್ಯುಮ್ನನೂ ಮುಂದಾಳುಗಳಾದರು. ಉಳಿದವರೆಲ್ಲ ತಮ್ಮ ತಮ್ಮ ಬಿರುದುಗಳೊಂದಿಗೆ ಅವರನ್ನು ಹಿಂಬಾಲಿಸಿದರು. ಮುಪ್ಪುರಗಳನ್ನು ಸುಡುವಾಗ ಶಿವನು ಬ್ರಹ್ಮನನ್ನು ಗಾಡಿಯನ್ನು ನಡೆಸುವದಕ್ಕಿಟ್ಟುಕೊಂಡಂತೆ ವೀರನಾದ ಅರ್ಜುನನು ತನ್ನ ತೇರಿನ ಮೇಲೆ ಕೈಯಲ್ಲಿ ಚಾಟಿಯನ್ನು ಹಿಡಿದ ಕೃಷ್ಣನನ್ನು ಕೂಡಿಸಿಕೊಂಡು ಅಲ್ಲಿಗೆ ಬಂದನು. ತನ್ನ ಸಂಗಡ ಕಾದುವದಕ್ಕೆ ಕೈಎತ್ತಿನಿಂತಿರುವ ಭೀಷ್ಮನೇ ಮೊದಲಾದ ಬಂಧುಗಳನ್ನು ನೋಡುತ್ತಲೇ ಅರ್ಜುನನ ಕಣ್ಣು ನೀರು ಸುರಿಸಿತು ; ಮುಖವು ಸಿಟ್ಟುಸಿರಿಟ್ಟಿತು ; ಮನಸ್ಸು ಧೈರ್ಯವನ್ನೂ ಕೈಯು ಬಿಲ್ಲನ್ನೂ ಬಿಟ್ಟಿತು. ಕೃಷ್ಣನು ಆಗ ಜ್ಞಾನೋಪದೇಶವನ್ನು ಮಾಡಿ

ಅರ್ಜುನನನ್ನು ಮತ್ತೆ ಯುದ್ಧಕ್ಕೆ ನಿಲ್ಲಿಸಿದನು. ರಣಘೋಷ ಹತ್ತು ದಿಕ್ಕುಗಳಲ್ಲಿಯೂ ಮೊಳಗಿತು. ಮೂಡಲ ಮತ್ತು ಪಡುವಲ ಗಾಳಿಗಳು ಹೊಡೆದುಕೊಂಡು ಬಂದ ಮೋಡಗಳು ಒಂದು ಕಡೆ ಸೇರುವಂತೆ ಎರಡು ದಂಡುಗಳೂ ಹತ್ತಿರಹತ್ತಿರಕ್ಕೆ ಸೇರಿದವು.

ಆಮೇಲೆ ಭಟರು ಆನೆಯ ಬಳಿಗೆ ಬಂದು ಹಲ್ಲುಗಳನ್ನು ಹಿಡಿದುಕೊಂಡು ಹತ್ತಿ ಹರಿತವಾದ ಕತ್ತಿಯಿಂದ ಮಾವಟಿಗನನ್ನು ಕೆಡಹಿ ಅಟ್ಟಹಾಸದಿಂದ ಅದರ ಕುಂಭಸ್ಥಲವನ್ನು ಚಪ್ಪರಿಸುವದಕ್ಕೆ ಮೊದಲುಮಾಡಿದರು. ಭಟರು ಬಂದು ಸೊಂಡಿಲನ್ನು ಬುಡದವರೆಗೂ ಕತ್ತರಿಸಿದ್ದರೂ ಆನೆಗಳು ಮುಂದಕ್ಕೆ ಬಗ್ಗಿ ಮಾವಟಿಗನ ಕೈಯಿಂದ ಜಾರಿಬಿದ್ದ ಅಂಕುಶವನ್ನು ತಮ್ಮ ಹಲ್ಲುಗಳಿಂದ ಎತ್ತಿ ತಮ್ಮಿಬ್ಬರ ಕ್ಷೇಮಕ್ಕಾಗಿ ಮಾವಟಿಗನ ಕೈಗೆ ಕೊಡುತ್ತಿದ್ದವು. ಕಾದುವದಕ್ಕೆ ಇದಿರುಬದಿರಾಗಿ ನಿಂತ ಎರಡು ಕುದುರೆಗಳು ತಮ್ಮ ಎರಡು ಮುಂಗಾಲುಗಳನ್ನೂ ಮೇಲಕ್ಕೆತ್ತಿಕೊಂಡು ತಮ್ಮ ಮೇಲಿರುವವರಿಗೆ ಆಯುಧಗಳು ತಾಕದಿರಲೆಂಬಂತೆ ಅಡ್ಡವಾಗಿರುತ್ತಿದ್ದವು. ಸುತ್ತುವ ನಡಿಗೆಯನ್ನು ಕಲಿತಿದ್ದ ಕುದುರೆಗಳ ಹೆಣಗಳು ತಮ್ಮ ವಿದ್ಯೆಯನ್ನು ಈಗ ತೋರಿಸುತ್ತಿರುವವೆಂಬಂತೆ ರಕ್ತದ ಹೊಳೆಗಳ ಸುಳಿಗಳಲ್ಲಿ ಗರಗರ ತಿರುಗುತ್ತಿದ್ದವು. ಕಾಲಾಳುಗಳೂ ತಮ್ಮ ತಮ್ಮ ಜೋಡಿಯವರೊಡನೆ ಹೆಣಗಾಟಗಳನ್ನು ನಡೆಸುತ್ತಿದ್ದರು.

## ಭೀಷ್ಮರ ಯುದ್ಧ

ಹೀಗೆ ನಡೆಯುತ್ತ ನಡೆಯುತ್ತ ಧೃಷ್ಟದ್ಯುಮ್ನನ ಕೈ ಬಲವೆನಿಸುತ್ತ ಬಂತು. ಕೌರವರ ದಂಡಿನಲ್ಲಿ ಹಾಹಾಕಾರವು ಹೆಚ್ಚಿತು. ಆಗ ಭೀಷ್ಮನು ಸಿಟ್ಟುಗೊಂಡು ತನ್ನ ಬಿಲ್ಲಿನಲ್ಲಿ ಟಂಕಾರವನ್ನು ಮಾಡಿ ಪಾಂಡವರ ದಂಡಿನೊಳಹೊಕ್ಕನು. ಭೀಷ್ಮನು ಬಿಲ್ಲಿನ ಹುರಿಯನ್ನು ಕಿವಿವರೆಗೆಳೆದು ಬಾಣಗಳನ್ನು ಬಿಡುತ್ತಲೆ ಹಗೆಗಳ ದಂಡಿನ ಆನೆಗಳೂ ಕುದುರೆಗಳೂ ಭಟರೂ ತೇರಿನವರೂ ನೆಲಾಹಿಡಿದರು. ತಾನು ಬರೀ ಗಾಡಿ

ಯನ್ನು ಹೊಡೆಯುವ ಮಾತ್ರದವನೆಂದು ಆಣೆಯನ್ನು ಹೊತ್ತಿದ್ದ ಕೃಷ್ಣನು ಈಗ ತನ್ನ ತೇರಿನ ಚಕ್ರವನ್ನು ತಿರುಗಿಸುವದನ್ನು ಬಿಟ್ಟು ಕೈಯಲಿದ್ದ ಸುದರ್ಶನಚಕ್ರವನ್ನು ತಿರುಗಿಸಬೇಕಾಯಿತು. ಪ್ರಲಯ ಕಾಲದ ರುದ್ರನಂತಿದ್ದ ಭೀಷ್ಮನು ಆ ರಣರಂಗದಲ್ಲಿ ಉರುಳಿಸಿದ ತಲೆ ಗಳಿಂದ ಆ ಪ್ರದೇಶವೆಲ್ಲ ಬಹಳ ಹಳ್ಳತಿಟ್ಟುಗಳುಳ್ಳದ್ದಾಯಿತು. ಹೀಗೆ ಒಂಬತ್ತು ದಿನಗಳವರೆಗೆ ಹೊಸ ಹೊಸ ಬಗೆಯ ತೋಳ ಬಲವನ್ನು ಮೆರೆಸಿ ಹತ್ತನೆಯ ದಿನ ಅವನು ಯುದ್ಧಕ್ಕೆ ಬಂದಾಗ ಅರ್ಜುನನು ದ್ರುಪದನ ಮಗನನ್ನು ಅವನ ಮುಂದಕ್ಕೆ ಬಿಟ್ಟನು. ಅವನನ್ನು ನೋಡುತ್ತಲೆ ಭೀಷ್ಮನು "ಇವನು ಹುಟ್ಟುವಾಗ ಹೆಂಗಸಾಗಿದ್ದವನು; ಇವನೊಡನೆ ಕಾದಬಾರದು" ಎಂದು ಹೇಳಿ ತನ್ನ ಕೈಯಲ್ಲಿದ್ದ ಬಿಲ್ಲನ್ನು ಕೆಳಕ್ಕಿ ಳಿಸಿದನು. ಅಷ್ಟೇ ಅಲ್ಲ. ಶಾಂತವಾದ ಮನಸ್ಸುಳ್ಳ ಆ ಭೀಷ್ಮನು ತನ್ನ ಮನಸ್ಸಿನಲ್ಲಿ ಪರಮಾತ್ಮನನ್ನು ನೆನೆಯುತ್ತ ಅಲ್ಲಿಯೇ ಅರ್ಜುನ ನಿಂದ ಒಂದು ಬಾಣದ ಮಂಚವನ್ನು ಮಾಡಿಸಿಕೊಂಡು ಅದರ ಮೇಲೆ ಮಗ್ಗುಲನ್ನೂರಿದನು. ಭೀಷ್ಮನ ಮೈಯಲ್ಲಾದ ಗಾಯಗಳಿಂದ ರಕ್ತವು ಪಡಗುಟ್ಟಿಕೊಂಡು ಇಳಿಯುತ್ತಿತ್ತು. ಅಷ್ಟು ಹೊತ್ತಿಗೆ ಸಂಜೆಯಾ ಯಿತು. ಭೀಷ್ಮನ ಸಾವನ್ನು ನೆನೆನೆನೆದು ಪಾಂಡವರ ಮತ್ತು ಕೌರ ವರ ಎರಡು ದಂಡಿನವರೂ ಕಣ್ಣೀರ ಕಾಲುವೆಗಳನ್ನು ಹರಿಸಿ ತಮ್ಮ ತಮ್ಮ ಗುಡಾರಗಳಿಗೆ ಹಿಂದಿರುಗಿದರು.

## ದ್ರೋಣನ ಉರುಬೆ

ಮರುದಿನ ದುರ್ಯೋಧನನು ದಂಡಿನ ಒಡೆಯತನದ ಪಟ್ಟಕ್ಕೆ ದ್ರೋಣನನ್ನು ಕೂಡಿಸಿದನು. ಭೀಷ್ಮನ ಸಾವನ್ನು ನೋಡಿ ಅತ್ತತ್ತು ಕಣ್ಣುಕೆಂಪಾದ ರಾಜರೆದುರಿಗೆ ದುರ್ಯೋಧನನು ದ್ರೋಣನನ್ನು ಕುರಿತು "ಗುರುಗಳೆ, ನೀವು ಧರ್ಮರಾಯನನ್ನು ಕೈಸೆರೆ ಹಿಡಿದು ಕೊಂಡು ಬರಬೇಕು. ಧರ್ಮರಾಯನು ನಾಚಿಕೆಯಿಂದ ತಲೆಯನ್ನು ತಗ್ಗಿಸಿಕೊಂಡು ನನ್ನ ಬಳಿಗೆ ಕಾಲಿನಿಂದಲೇ ನಡೆದುಕೊಂಡು ಬರುವ

ಹಾಗೆ ಮಾಡಬೇಕು" ಎಂದು ಹೇಳಿದನು. ಆ ಮಾತಿಗೆ ದ್ರೋಣನು "ಅಪ್ಪ, ದುರ್ಯೋಧನ, ಯಾರಿಗೆ ಶ್ರೀಕೃಷ್ಣನು ಗಾಡಿಯನ್ನು ಹೊಡೆಯುವವನಾಗಿರುವನೊ ಅಂಥ ಅರ್ಜುನನ ಗಾಂಡೀವಧನುಸ್ಸು ಸದ್ದು ಮಾಡದೆ ಇದ್ದ ಪಕ್ಷದಲ್ಲಿ ಧರ್ಮರಾಯನು ವಿರಾಟನೇ ಮೊದಲಾದ ಎಷ್ಟು ರಾಜರಿಂದ ಕೂಡಿದ್ದರೂ ನಿನ್ನ ಎಲ್ಲ ಬಯಕೆಗಳನ್ನೂ ಮುಗಿಸಿ ಕೊಡುವದಕ್ಕೆ ಆದೀತು" ಎಂದು ಉತ್ತರವನ್ನು ಕೊಟ್ಟನು. ಸಮಸ್ತವಾದ ಅಸ್ತ್ರವಿದ್ಯೆಗಳಿಗೂ ತೌರುಮನೆಯಾದ ದ್ರೋಣನ ಈ ಮಾತನ್ನು ಕೇಳಿ ಅಲ್ಲಿದ್ದ ರಾಜರೆಲ್ಲ ತಲೆದೂಗಿದರು.

ಇದಾಗುತ್ತಲೆ ಭೀಷ್ಮನ ಹೆಸರಿನಿಂದ ಶೋಭಿಸುವ ಬಾಣಗಳ ಕುಣಿತದ ಮನೆಯಾಗಿದ್ದ ಯುದ್ಧಭೂಮಿಗೆ ಎರಡು ಕಡೆಯವರೂ ಬಂದರು. ಒಂದೇ ಕಡೆ ಇಷ್ಟು ಜನರು ಸೇರಿದ ಭಾರವನ್ನು ತಡೆಯಲಾರದೆ ಯುದ್ಧಭೂಮಿಯೇ ಮೇಲಕ್ಕೆ ಹಾರುತ್ತಿರುವದೆಂಬಂತೆ ಧೂಳಿಯು ಆಕಾಶವನ್ನೆಲ್ಲ ದಟ್ಟವಾಗಿ ವ್ಯಾಪಿಸಿತು. ರಣಭೇರಿಗಳ ಝಾಂಕಾರಗಳು ಹತ್ತು ದಿಕ್ಕಿನಲ್ಲಿಯೂ ಗಡಗುಟ್ಟಿದವು. ಒಡನೆ ಎಲ್ಲ ರಾಜರೂ ನೆಲದ ಮೇಲೆ ಎರಡು ಮಂಡಿಗಳನ್ನೂರಿ ಸಿಂಹನಾದವೆಂಬ ಮಂತ್ರವನ್ನುಚ್ಚರಿಸಿ ತಮ್ಮ ಬತ್ತಳಿಕೆಯೆಂಬ ಪೆಟ್ಟಿಗೆಯಿಂದ ಬಾಣಗಳೆಂಬ ಹಾವುಗಳನ್ನು ಹೊರಕ್ಕೆ ತೆಗೆದರು. ಆ ಬಾಣಗಳು ಜೀವಗಳನ್ನು ಸೆಳೆಯುವದಕ್ಕೆ ಆತುರಗೊಳ್ಳುತ್ತ ಭಯಂಕರವಾದ ವಿಷದಿಂದ ಕೂಡಿದವುಗಳಾಗಿದ್ದವು. ದ್ರೋಣನು ತನಗೆ ಇದಿರಾದವರ ರುಂಡಗಳು ಕೆಳಗೂ ಮುಂಡಗಳು ಮೇಲೂ ಆಗುವಂತೆ ಮಾಡುತ್ತ ಚಂದ್ರನನ್ನು ಹಿಡಿಯುವದಕ್ಕೆ ಹೋಗುವ ರಾಹುವಿನಂತೆ ಧರ್ಮರಾಯನನ್ನು ಹಿಡಿಯುವ ತವಕದಿಂದ ಮುಂದಾದನು. ಉಳಿದ ಕಡೆಯ ಹಗೆಗಳ ವಿಚಾರವನ್ನು ಭೀಮ ಮೊದಲಾದವರಿಗೆ ಬಿಟ್ಟು, ಅರೆಗಳಿಗೆಯಲ್ಲಿಯೇ ಕೃಷ್ಣನು ಅರ್ಜುನನ ತೇರನ್ನು ದ್ರೋಣನ ಕಡೆಗೆ ತಿರುಗಿಸಿ ತಂದನು. ದೊಡ್ಡ ಬೆಟ್ಟವು ನದಿಯ ಪ್ರವಾಹವನ್ನು ತಡೆಯುವಂತೆ ಅರ್ಜುನನು ದ್ರೋಣನ ಉಬ್ಬಟೆಯನ್ನು ತಡೆದು ನಿಲ್ಲಿಸಿದನು. ಇವನೊಡನೆ ಕಾದಿದ

ಅರ್ಜುನನಿಗೆ ಇಂದು ದ್ರೋಣನನ್ನು ಕೆಣಕಬೇಕೆನಿಸಿತು. ಆಗ ಅವನು ತನ್ನ ಬಾಣಗಳಿಂದ ಹಗೆಗಳನ್ನು ಕೊಚ್ಚಿ ಕೆಡಹಿ ಹದ್ದುಕಾಗೆಗಳಿಗೆ ಔತನವನ್ನು ಮಾಡಿದನು. ಅರ್ಜುನನ ಹೋರಟೆಯ ಮುಂದೆ ದ್ರೋಣನ ತೋಳ ಬಲವು ಇಳಿಮುಖವಾಯಿತು. ಇದರಿಂದ ದ್ರೋಣನು ಮುಖಕ್ಕೆ ಸೆರಗೆಳೆದುಕೊಂಡು ತನ್ನ ಬಿಡಾರಕ್ಕೆ ಹಿಂದಿರುಗಬೇಕಾಯಿತು.

## ಭಗದತ್ತನ ಸಾವು

ಮರುದಿನ ದ್ರೋಣನ ಕಿವಿಮಾತಿನಂತೆ ತ್ರಿಗರ್ತರೆಂಬುವರು ಅರ್ಜುನನನ್ನು ಬೇರೆ ಕಡೆಗೆ ಯುದ್ಧಕ್ಕೆ ಕರೆದೊಯ್ದರು. ಆಗ ಚಮರಮೃಗಗಳು ಕಾಳ್ಗಿಚ್ಚಿಲ್ಲದ ಅಡವಿಯಲ್ಲಿ ಗುಂಪುಗುಂಪಾಗಿ ನುಗ್ಗುವಂತೆ ಧೃತರಾಷ್ಟ್ರನ ಕಡೆಯವರೆಲ್ಲ ನಿರ್ಭಯದಿಂದ ಹಗೆಗಳ ದಂಡಿನೊಳ ಹೊಕ್ಕರು. ಆ ದಿನವಾದರೂ ದುರ್ಯೋಧನನ ಬಯಕೆಯನ್ನು ಈಡೇರಿಸಬೇಕೆಂದು ದ್ರೋಣನು ಸಮಯವನ್ನು ಕಾದಿದ್ದನು. ಕೃಷ್ಣಾರ್ಜುನರು ಧರ್ಮರಾಜನ ಕಾವಲಿಗಾಗಿ ಆ ದಿನ 'ಸತ್ಯಜಿತ್' ಎಂಬುವನನ್ನು ಗೊತ್ತುಮಾಡಿದ್ದರು. ದ್ರೋಣನು ಕೆಂಡಗಳನ್ನು ಕಾರುವ ಕಣ್ಣುಗಳಿಂದ ಅವನನ್ನು ದುರದುರನೆ ನೋಡುತ್ತ ತಾನೊಬ್ಬನೇ ನುಗ್ಗಿ ಬಂದನು. ಸತ್ಯಜಿತನು ದ್ರೋಣನ ತೇರಿನ ನೊಗವನ್ನೇ ನುಚ್ಚುನುರಿ ಮಾಡಿದನು. ಇದರಿಂದ ತಳಮಳಗೊಂಡ ದ್ರೋಣನು ಸತ್ಯಜಿತನ ತಲೆಯನ್ನು ಕ್ಷಣಮಾತ್ರದಲ್ಲಿ ಕತ್ತರಿಸಿದನು. ಸತ್ಯಜಿತನ ತಲೆಯು ಕೆಳಗೆ ಬೀಳುವಾಗ ಧರ್ಮರಾಯನ ಕಣ್ಣೀರೂ ಕೆಳಗೆ ಬಿತ್ತು. ಆಗಲೇ ದ್ರೋಣನು ಇನ್ನು ಅವನ ಹತ್ತಿರಕ್ಕೆ ಬರುವ ಸನ್ನಾಹವನ್ನು ಮಾಡುತ್ತಲೆ ಅವನ್ನು ನೋಡಿ ಧರ್ಮರಾಯನಿಗೆ ಉಬ್ಬಸ ಹತ್ತಿತು. ಅಷ್ಟು ಹೊತ್ತಿಗೆ ಬಂದ ಭೀಮನು ಅವನ ಕುದುರೆಗಳನ್ನೂ ಧೃಷ್ಟದ್ಯುಮ್ನನು ಸಾರಥಿಯನ್ನೂ ನಕುಲನು ಬಿಲ್ಲನ್ನೂ ಸಹದೇವನು ಧ್ವಜವನ್ನೂ ಅಳಿಸಿ ಹಾಕಿದರು.

ದ್ರೋಣನಿಗೆ ಆದ ಈ ಸೋಲನ್ನು ನೋಡಿ ಸಿಟ್ಟುಗೊಂಡ ಭಗ
ದತ್ತನು ಅನೇಕ ಆನೆಗಳೊಡನೆ ಭೀಮನನ್ನು ಬೆನ್ನಟ್ಟಿಕೊಂಡು ಬಂದನು.
ಆ ಆನೆಗಳ ಕೊರಳುಗಳಲ್ಲಿದ್ದ ಗಂಟೆಗಳ ಗಣಗಣವೆಂಬ ಸದ್ದಿನಿಂದ
ಅಷ್ಟದಿಕ್ಪಾಲಕರ ಪಟ್ಟಣಗಳ ಜನರ ಕಿವಿಗಳೆಲ್ಲ ಕಿವುಡಾಗಿದ್ದವು. ಇಷ್ಟು
ಆನೆಗಳೊಡನೆ ಸೊಕ್ಕಿದ ಆ ಭಗದತ್ತನು ಸುಪ್ರತೀಕವೆಂಬ ಆನೆಯನ್ನು
ಹತ್ತಿಕೊಂಡು ಬಂದನು. ಪರಶುರಾಮನ ಅಸ್ತ್ರದಿಂದ ಪಶ್ಚಿಮ ಸಮು
ದ್ರವು ದೂರಕ್ಕೆ ಸರಿಯಿತೆಂಬ ನಾಣ್ಣುಡಿಯು ದಿಟವೆಂದು ತಿಳಿಸುವಂತೆ
ಭಗದತ್ತನನ್ನು ಕಾಣುತ್ತಲೆ ಧರ್ಮರಾಯನ ಸೇನಾಸಮುದ್ರವು ಹಿಂಜರಿ
ಯಿತು. ಆದರೂ ಭೀಮನು ಧ್ವಜಪಟಗಳನ್ನು ಕೆಡಹುತ್ತಲೂ ತೇರು
ಗಳನ್ನು ಮುರಿಯುತ್ತಲೂ ಹಲ್ಲುಗಳನ್ನು ಕಡಿಯುತ್ತಲೂ ಆನೆಗಳನ್ನು
ಗದೆಯಿಂದ ಮಲಗಿಸುತ್ತಲೂ ಮುಂದುವರಿದಾಗ ಆ ಸುಪ್ರತೀಕಕ್ಕೆ
ತನ್ನ ಜೋಡಿಗೆ ರಕ್ತದ ಹೊಳೆಯಲ್ಲಿ ಕಾಣುತ್ತಿದ್ದ ಅದರ ಪ್ರತಿಬಿಂಬ
ಒಂದೇ ಎನ್ನುವ ಸ್ಥಿತಿಯುಂಟಾಯಿತು. ಆಗ ಸುಪ್ರತೀಕವು ರೇಗಿ
ತನ್ನ ಮೇಲೆ ಬೀಳುವದಕ್ಕೆ ಬರುತ್ತಲೆ ಭೀಮನು ಎದೆನಡುಗಿ ಕಾಲಿಗೆ
ಬುದ್ಧಿಯನ್ನು ಹೇಳಬೇಕಾಯಿತು.

ಈ ಸುದ್ದಿಯನ್ನು ಕೇಳಿ ಅರ್ಜುನನಿಗೆ ವಿಷಾದವಾಯಿತು. ಅವನು
ತ್ರಿಗರ್ತರನ್ನೊಂದು ಕಡೆಗೆ ನೂಕಿ ಒಡನೆ ತನ್ನ ತೇರನ್ನು ಭಗದತ್ತನ
ಕಡೆಗೆ ಹರಿಸಿದನು. ದ್ರೋಣನೂ ಭಗದತ್ತನೂ ಒಂದು ಕಡೆ, ಅರ್ಜುನ
ನೊಂದು ಕಡೆ-- ಹೀಗೆ ಬಹಳ ಹೊತ್ತು ಹೋರಾಟವಾಯಿತು. ಆಗ
ಸುಪ್ರತೀಕವು ತನ್ನ ಸೊಂಡಿಲಿನಿಂದ ಅರ್ಜುನನ ತೇರನ್ನು ಪುಡಿಮಾಡ
ಬೇಕೆಂದು ನೋಡಿತು. ಗಾಡಿಯನ್ನು ಹೊಡೆಯುವವನಾಗಿ ಕುಳಿತಿದ್ದ
ಕೃಷ್ಣನ ಕೈಚಳಕದಿಂದ ಅದರ ಚೆಲ್ಲಾಟ ನಡೆಯಲಿಲ್ಲ. ಭಗದತ್ತನು
ಅರ್ಜುನನನ್ನು ಕೊಲ್ಲುವದಕ್ಕೆಂದು ಒಂದು ಶಕ್ತಿಯನ್ನು ಪ್ರಯೋಗಿಸಿ
ದನು. ಅದನ್ನು ಅರ್ಜುನನು ನಡುದಾರಿಯಲ್ಲಿಯೇ ಮುರಿದು ಹಾಕಿ
ದನು. ಆಮೇಲೆ ಭಗದತ್ತನು ಅರ್ಜುನನನ್ನು ಮುಗಿಸಿಯೇ ಬಿಡಬೇ
ಕೆಂದು ತನ್ನಲ್ಲಿದ್ದ ವೈಷ್ಣವಾಸ್ತ್ರವನ್ನು ಬಿಟ್ಟನು. ಅದು ಅರ್ಜುನನನ್ನು

ತಾಕಲರಿಯದೆ ಕೃಷ್ಣನ ಕೊರಳಲ್ಲಿ ವನಮಾಲೆಯಾಗಿ ಕೊನೆಗಂಡಿತು. ಆಗ ಅರ್ಜುನನು ಆ ಸುಪ್ರತೀಕದ ಮತ್ತು ಭಗದತ್ತನ ತಲೆಯನ್ನು ನೆಲಕ್ಕುರುಳಿಸಿ ಆ ಆನೆಯ ಮದೋದಕದ ಮತ್ತು ಆ ವೀರನ ಕಸ್ತೂರೀ ತಿಲಕದ ಸುವಾಸನೆಯಿಂದ ಕೂಡಿ ಭೂಮಿಯು ನಿಜವಾಗಿ ಗಂಧವತಿಯಾಗುವಂತೆ ಮಾಡಿದನು. ಭಗದತ್ತನು ಸತ್ತ ಸುದ್ದಿಯನ್ನು ಕೇಳಿದ ಮೇಲೆ ಪಾಂಡವರು ಸತ್ಯಜಿತನ ಸಾವಿನಿಂದಾದ ದುಃಖವನ್ನು ಬಿಟ್ಟರು.

## ಅಭಿಮನ್ಯುವಿನ ಕೊಲೆ

ಅಷ್ಟು ಹೊತ್ತಿಗೆ ಸಂಜೆಯಾಯಿತು. ದ್ರೋಣನ ಸುತ್ತಲೂ ಕುದುರೆ, ಆನೆ, ತೇರು, ಕಾಲಾಳು- ಇವು ಅಲ್ಲೊಂದು ಇಲ್ಲೊಂದು ಮಾತ್ರ ಕಾಣುತ್ತಿದ್ದವು. ಆ ಸ್ಥಿತಿಯಲ್ಲಿ ಅವನು ತನ್ನ ಬಿಡಾರಕ್ಕೆ ಹಿಂದಿರುಗಿದನು. ಅವನು ಮನೆಗೆ ಬರುತ್ತಲೆ ದುರ್ಯೋಧನನು ಅವನ ಬಳಿಗೆ ಬಂದನು. ಆ ಸಮಯದಲ್ಲಿ ದ್ರೋಣನು ಅಂಗಿಯನ್ನು ತೆಗೆದಿಟ್ಟು ಗಾಯಗಳ ನೋವಿನಿಂದ ನರಳುತ್ತ ಮೆತ್ತಗಿರುವ ಮಂಚದ ಮೇಲೆ ಮಲಗಿದ್ದನು. ಆಗ ದುರ್ಯೋಧನನು ಕೈಮುಗಿದುಕೊಂಡು ನಿಂತು “ಗುರುವರ್ಯರೆ, ನೀವು ನನ್ನ ಬಯಕೆಯನ್ನು ನೆರವೇರಿಸಲಿಲ್ಲ. ನಿಮ್ಮ ದಯೆ ನಮ್ಮಲ್ಲಿ ಕಡಿಮೆಯಾಯಿತು. ನಮ್ಮ ಮುತ್ತಜ್ಜನಾದ ಭೀಷ್ಮನು ಮಂಚದಲ್ಲಿ ಶರೀರವನ್ನೂ ಮನಸ್ಸಿನಲ್ಲಿ ಕೃಷ್ಣನನ್ನೂ ನಿಮ್ಮ ಕೈಯಲ್ಲಿ ನನ್ನ ಇಷ್ಟಸಿದ್ಧಿಯನ್ನೂ ಇಟ್ಟು ಬಾಣದ ಮಂಚದ ಮೇಲೆ ಪವಡಿಸಿರುವನು” ಎಂದು ಹೇಳುತ್ತ ಕಣ್ಣೀರುಹಾಕಿದನು. ಗುಣಾಢ್ಯನೂ ದಯಾಶಾಲಿಯೂ ಆದ ದ್ರೋಣನು ಅವನನ್ನು ಕುರಿತು “ರಾಜನೆ, ನಾಳೆ ನೋಡು. ಪಾಂಡವರ ಕಣ್ಣಲ್ಲಿ ನೀರು ಸುರಿಸಿ ನಿಮ್ಮನ್ನೆಲ್ಲ ಗುಡುಗಾಡಿಸುತ್ತೇನೆ” ಎಂದು ಸಮಾಧಾನವನ್ನು ಹೇಳಿ ಅವನನ್ನು ಮನೆಗೆ ಕಳುಹಿಸಿದನು.

ಅರ್ಜುನನ ಎಡಗೈ ಚಳಕವನ್ನು ನೆನೆನೆನೆದಾಗಲೆಲ್ಲ ದ್ರೋಣನ ಮನಸ್ಸು ಕಳವಳಗೊಳ್ಳುತ್ತಿತ್ತು. ಆ ರಾತ್ರಿಯೆಲ್ಲ ಅವನು ಕಣ್ಣು

ಮುಚ್ಚಲಿಲ್ಲ. ಹೀಗೆಯೇ ರಾತ್ರಿಯೂ ಕಳೆಯಿತು. ಮರುದಿನ ದ್ರೋಣನು ಯುದ್ಧಭೂಮಿಗೆ ಬಂದು ತನ್ನ ದಂಡನ್ನು ಪದ್ಮದ ಆಕಾರವಾಗಿ ನಿಲ್ಲಿಸಿದನು. ಅದನ್ನು ನೋಡಿ ಆಕಾಶದಲ್ಲಿ ಓಡಾಡುವ ದೇವತೆಗಳು ಕೂಡ ಮೂಗಿನ ಮೇಲೆ ಬೆರಳಿಟ್ಟುಕೊಂಡರು. ಅದನ್ನು ನೋಡಿದರೆ ಹಗೆಗಳ ಪ್ರಾಣಗಳೆಂಬ ಮೃಗಗಳನ್ನು ಹಿಡಿಯುವದಕ್ಕೆ ಒಡ್ಡಿದ್ದ ಬಲೆಯಂತಿತ್ತು. ಹೀಗಿರುವಾಗ ಧರ್ಮರಾಯನು ಅಭಿಮನ್ಯುವನ್ನು ಕುರಿತು "ಮಗು, ನಿಮ್ಮಪ್ಪನು ಬೇರೆ ಕಡೆ ಯುದ್ಧದಲ್ಲಿ ತೊಡಗಿದ್ದಾನೆ. ಈಗ ದಂಡಿನ ಯೋಗಕ್ಷೇಮವೆಲ್ಲ ನಿನಗೆ ಸೇರಿದೆ. ಏಳು. ಕವಚವನ್ನು ಹಾಕಿಕೊ. ಧನುಸ್ಸನ್ನು ತೆಗೆದುಕೊ. ದಂಡಾಳುಗಳನ್ನು ಕರೆದುಕೊ. ತೇರನ್ನು ಹತ್ತು. ಹಗೆಗಳನ್ನು ಬೇಟೆಯಾಡು" ಎಂದನು. ದೊಡ್ಡಪ್ಪನ ಅಪ್ಪಣೆಯನ್ನು ತಲೆಯಲ್ಲಿ ಹೊತ್ತು ಅಭಿಮನ್ಯು ಯುದ್ಧಕ್ಕೆ ಮುಂದಾದನು. ರಣಭೇರಿ ಮೊದಲಾದವುಗಳೆಲ್ಲ ಭೋರ್ಗರೆದವು, ಅಭಿಮನ್ಯುವು ಒಂಟಿಯಾಗಿಯೇ ಆದೊಂದಾಟವೆಂದು ತಿಳಿದವನಂತೆ ಹಗೆಗಳ ದಂಡಿನೊಳಹೊಕ್ಕು ತನ್ನ ಬಿಲ್ಲಿನ ಬಲುಮೆಯಿಂದ ಹಗೆಗಳ ದಂಡನ್ನು ನೆಲಕ್ಕುರುಳಿಸುತ್ತ ಬಂದನು. ಅಭಿಮನ್ಯು ಒಳಹೊಕ್ಕ ಮೇಲೆ ಅವನಿಗೆ ನೆರವಾಗಿ ಬಂದವರ ಕಡೆಯದೊಂದು ಹಕ್ಕಿಯೂ ಒಳಹೋಗದಂತೆ ದಂಡಿನ ಮುಂಗಡೆ ಸೈಂಧವನು ಅಡ್ಡನಿಂತನು. ಅವನಿಗೆ ಈಶ್ವರನ ವರದ ಬೆಂಬಲವಿದ್ದದ್ದರಿಂದ ಅವನ ಮೇಲೆ ಯಾರ ಕೈಯೂ ನಡೆಯಲಿಲ್ಲ. ಹಿಂದೆ ಬಹಳ ಹಳ್ಳತಿಟ್ಟುಗಳಾಗಿದ್ದ ಭೂಮಿಯನ್ನು ಪೃಥುಚಕ್ರವರ್ತಿಯೆಂಬುವನು ತನ್ನ ಬಿಲ್ಲಿನಿಂದ ಹೊಡೆದು ಸಮಭೂಮಿಯನ್ನು ಮಾಡಿದನೆಂದು ಹೇಳುತ್ತಾರೆ. ಆ ಸಮಭೂಮಿಯು ಈಗ ಅಭಿಮನ್ಯುವಿನ ಹೊಡೆತದಿಂದ ನೆಲಕ್ಕುರುಳಿದ ಆನೆಗಳಿಂದ ಮತ್ತೆ ಹಳ್ಳತಿಟ್ಟುಗಳುಳ್ಳದ್ದೇ ಆಯಿತು. ಇದಲ್ಲದೆ ಭೀಷ್ಮನು ಒಮ್ಮೆ ಕರ್ಣನನ್ನು ಅರ್ಧರಥನೆಂದು ಹೇಳಿದ ಮಾತು ನಿಜವಾಗುವಂತೆ ಅಭಿಮನ್ಯುವು ಕರ್ಣನ ತೇರನ್ನು ತನ್ನ ಬಾಣದಿಂದ ಎರಡು ತುಂಡುಮಾಡಿದನು. ಅಭಿಮನ್ಯುವಿನ ತೋಳ ಬಲವ

ಅಲ್ಲಿ ತಾಂಡವನಾಡುತ್ತಿದ್ದಾಗ ದ್ರೋಣನ ಹೆಂಡತಿಯ ಮಂಗಲ ಸೂತ್ರವು ನಡುಗುವದಕ್ಕೆ ಮೊದಲುಮಾಡಿತು. ಆಗ ಕರ್ಣನು ಅವನ ಬಿಲ್ಲನ್ನೂ ದ್ರೋಣನು ಅವನ ಕುದುರೆಗಳನ್ನೂ ಕೃಪನು ಅವನ ಗಾಡಿಯವನನ್ನೂ ಅಶ್ವತ್ಥಾಮನು ಅವನ ಧ್ವಜಪಟವನ್ನೂ ಕತ್ತರಿಸಿಹಾಕಿದರು. ಒಬ್ಬನನ್ನು ಸೋಲಿಸುವದಕ್ಕೆ ಇಷ್ಟು ಜನರು ಸೇರಿಕೊಂಡದ್ದನ್ನು ನೋಡಿ ಆಕಾಶದಲ್ಲಿ ಓಡಾಡುವ ದೇವತೆಗಳು ಕೌರವರದು ನಾಚಿಕೆಗೇಡೆಂದು ಜರಿದು ಅಭಿಮನ್ಯುವಿನ ಮೇಲೆ ಹೂವಿನ ಮಳೆಯನ್ನು ಕರೆದರು. ಹುಡುಗನಾದ ತನ್ನೊಬ್ಬನ ಮೇಲೆ ದೊಡ್ಡವರೆಲ್ಲ ಒಟ್ಟುಗೂಡಿ ಬಂದರೂ ಅವನು ಎದೆಗೆಡದೆ ತೇರಿನಿಂದ ಧುಮ್ಮಿಕ್ಕಿ ರಣರಂಗದಲ್ಲಿ ಗುಡುಗಾಡುವದಕ್ಕೆ ತೊಡಗಿದನು. ದುರ್ಯೋಧನನ ಮಗನೂ ದುಃಶಾಸನನ ಮಗನೂ ಯಾವಾಗಲೂ ಜೊತೆಯಾಗಿಯೇ ಇರುತ್ತಿದ್ದದ್ದನ್ನು ನೋಡಿ ಅವರು ಒಬ್ಬರನ್ನು ಬಿಟ್ಟೊಬ್ಬರು ಒಂಟಿಯಾಗಿ ಹೋಗುವದಕ್ಕೆ ಹೆದರುವರೆಂದು ತಿಳಿದು ಅವನು ಅವರಿಬ್ಬರನ್ನೂ ಒಂದೇ ಸಲ ಯಮಪುರದ ದಾರಿಯನ್ನು ಹಿಡಿಸಿದನು. ಇಷ್ಟಾದ ಮೇಲೆ ಕರ್ಣ ಮೊದಲಾದವರು ಒಂದು ಕಡೆ ಕಿವಿಮಾತಾಡಿಕೊಂಡು ಒಂದೇ ಕಡೆ ಸೇರಿ ಮೋಸದಿಂದ ಅವನನ್ನು ನೆಲಕ್ಕುರುಳಿಸಿದರು. ಒಡನೆ ಕೌರವರ ಕಡೆಯ ಸಿಂಹನಾದವೂ ಪಾಂಡವರ ಕಡೆಯ ಗೋಳೂ ಒಂದನ್ನೊಂದು ಮೀರಿಸುತ್ತ ಹೊರಹೊಮ್ಮಿದವು. ಅಷ್ಟು ಹೊತ್ತಿಗೆ ಸಂಜೆ ಆಯಿತು. ಎರಡು ದಂಡುಗಳೂ ತಮ್ಮ ತಮ್ಮ ಶಿಬಿರಗಳಿಗೆ ಹಿಂದಿರುಗಿದವು.

## ಸೈಂಧವನ ಕೊನೆಗಾಲ

ಅತ್ತ ಅರ್ಜುನನು ತನ್ನ ಬಾಣಗಳಿಂದ ತ್ರಿಗರ್ತರ ಸೈನ್ಯಗಳನ್ನೆಲ್ಲ ತೂತುಮಾಡಿದನು. ಈ ಗೆಲುವಿನಿಂದ ಅವನ ಮನಸ್ಸಿನಲ್ಲಿ ಉಲ್ಲಾಸವು ತೋರಬೇಕಾಗಿದ್ದರೂ ತೊಳಲಿಕೆ ಕಾಣಿಸಿಕೊಂಡಿತು. ಅವನ ಕಣ್ಣುಗಳಲ್ಲಿ ನೀರು ಒಸರಿತು. ಅವನ ಕೈಯಿಂದ ಬಿಲ್ಲು ಜಾರಿ ಬಿತ್ತು.

ಅವನ ಮನಸ್ಸು ಬೇಗುದಿಗೊಂಡಿತು. ಇದರ ಕಾರಣವೇನಿರಬಹುದೆಂದು ಗುಣಾಕಾರವನ್ನು ಹಾಕುತ್ತ ಅವನು ಧರ್ಮರಾಯನ ಬಳಿಗೆ ಬಂದನು. ಅವನನ್ನು ಕಾಣುತ್ತಲೆ ಅವನ ಬಂಧುಗಳ ಕಣ್ಣುಗಳಲ್ಲೆಲ್ಲ ನೀರು ಸುರಿಯಿತು. ಆಗ ಮಗನ ಸಮಾಚಾರವು ಅವನ ಕಿವಿಗೆ ಬಿತ್ತು. ಒಡನೆ ಅವನ ಮನಸ್ಸು ಧಗಧಗಿಸುವದಕ್ಕಾರಂಭಿಸಿತು. ಅಗ್ನಿಯಿಂದ ನೀರು ಹುಟ್ಟುವದೆಂದು ತೋರಿಸುವಂತೆ ಶೋಕಾಗ್ನಿಯಿಂದ ಅವನ ಕಣ್ಣುಗಳಿಂದ ನೀರು ದಡದಡ ಇಳಿಯುವದಕ್ಕೆ ಮೊದಲುಮಾಡಿತು. ವೀರನಾದ ಮಗನನ್ನು ನೆನೆದು ನೆನೆದು ನೆಲದ ಮೇಲೆ ಹೊರಳಾಡುವ ಅರ್ಜುನನಿಗೆ ಧರ್ಮರಾಯ, ಕೃಷ್ಣ ಮೊದಲಾದವರೆಲ್ಲ ನೂರು ಸಮಾಧಾನವನ್ನು ಹೇಳಿದರು. ಆದರಿಂದ ಅವನು ಮೊದಲಿನ ಸ್ಥಿತಿಗೆ ಬರುವಾಗ ಕೋಪದಿಂದ ಎರಡು ಕೈಗಳನ್ನೂ ಮೇಲಕ್ಕೆತ್ತಿ ಹಗೆಗಳೆಲ್ಲರೂ ನೋಡುವಂತೆಯೇ "ನಾಳೆ ಸಂಜೆಯೊಳಗೆ ಸೈಂಧವನ ತಲೆಯನ್ನು ನೆಲಕ್ಕೆಳಿಸುತ್ತೇನೆ; ತಪ್ಪಿದರೆ ನಾನೇ ಬೆಂಕಿಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಳ್ಳುತ್ತೇನೆ" ಎಂದು ಆಣೆಯನ್ನು ತೊಟ್ಟನು. ಈ ಮಾತನ್ನು ಕೇಳಿ ಗಾಬರಿಗೊಂಡ ಸೈಂಧವನಿಗೆ ದ್ರೋಣನು "ನಿನ್ನನ್ನು ಪಾರುಮಾಡಿ ಕಾಪಾಡುವ ಭಾರವೆಲ್ಲ ನನ್ನದು" ಎಂದು ಮಾತುಕೊಟ್ಟನು.

ಮರುದಿನ ಹೊತ್ತು ಹುಟ್ಟಿತು. ರಣಭೇರಿ ಮೊಳಗಿತು. ಅಭಿಮನ್ಯುವಿನ ಸಾವಿನಿಂದ ಎಲ್ಲರೂ ಅತ್ತು ಅತ್ತು ಕಣ್ಣೀರಿನಿಂದ ಕೆಸರಾಗಿದ್ದ ಬಾಗಿಲಿಗೆ ಕೃಷ್ಣನು ತೇರನ್ನು ಹರಿಸಿಕೊಂಡು ತಂದನು. ಆ ತೇರಿನ ತುತ್ತತುದಿಯ ಮೇಲೆ ಧ್ವಜಪಟದಲ್ಲಿ ಹನುಮಂತನು ಕಂಗೊಳಿಸುತ್ತಿದ್ದನು. ಗರುಡ, ಗಾಳಿ, ಮನಸ್ಸು ಇವುಗಳನ್ನು ಮೀರಿಸುವ ಕುದುರೆಗಳನ್ನು ಹೂಡಿದ್ದ ತೇರನ್ನು ಅರ್ಜುನನು ಏರಿದನು. ದಂಡು ಯುದ್ಧಭೂಮಿಯ ಕಡೆಗೆ ಸಾಗಿತು. ಅತ್ತ ದ್ರೋಣಾಚಾರ್ಯರು ಮುಗಿಲುಗಳಿಗೆ ಅಡ್ಡನಿಲ್ಲುವ ತೇರುಗಳಿಂದಲೂ ಕೆನ್ನೆಗಳಲ್ಲಿ ಇಳಿಯುತ್ತಿರುವ ಸೊಕ್ಕಿನ ನೀರಿನ ನರುಗಂಪನ್ನು ನಾಲ್ಕು ಕಡೆಗೂ ಬೀರುತ್ತಿರುವ ಮದ್ದಾನೆಗಳಿಂದಲೂ ಬಗೆಬಗೆಯಾದ ನಡಿಗೆಗಳನ್ನು

ತೋರುವ ಕುಮಾರಿಗಳಿಂದಲೂ ಹುರುಪುಗೊಂಡ ಕಾಲಾಳುಗಳಿಂದಲೂ
ಕೂಡಿದವರಾಗಿ ಸೈಂಧವನನ್ನು ಹಿಂಭಾಗದಲ್ಲಿ ಅಡಗಿಸಿಕೊಂಡು
ತಮ್ಮ ದಂಡನ್ನೊಂದು ಆಕಾರವಾಗಿ ನಿಲ್ಲಿಸಿಕೊಂಡರು. ಅರ್ಜುನನು
ಗುರುಗಳಿಗೆ ಎರಗಿ ಆಮೇಲೆ ಕಾದಬೇಕೆಂದು ನೆನೆಸಿದವನಾಗಿ ಮೊದಲು
ಅವರ ಪಾದಗಳಿಗೆ ಬಾಣಗಳನ್ನು ಬಿಟ್ಟು ತಾನೇ ಮುಂದೆ ಹೊರಟು
ದಾರಿಯನ್ನು ಮಾಡಿಕೊಳ್ಳುತ್ತ ಬಿರುಗಾಳಿಯು ಮೋಡಗಳನ್ನು ಚದ
ರಿಸುವಂತೆ ದ್ರೋಣರ ದಂಡನ್ನು ಚದರಿಸಿಬಿಟ್ಟನು.

ಕೃಷ್ಣನ ಕೈಚಳಕದಿಂದ ಅರ್ಜುನನ ತೇರು ಹಗೆಗಳ ದಂಡಿನ
ನಡುವೆ ಬೇಕುಬೇಕಾದ ಕಡೆ ತಿರುಗಿತು. ಆಗ ಎದ್ದ ಧೂಳಿಯು
ಸೂರ್ಯಬಿಂಬವನ್ನು ಮುಸುಕಿ ಸಂಜೆಯಂತೆ ಮಾಡಲು ಸೈಂಧವನ
ಕೊಲೆಯಾಗದೆ ಸಂಜೆಯಾದದ್ದು ಅರ್ಜುನನ ಅಗ್ನಿಪ್ರವೇಶಕ್ಕೆ ಕಾರಣ
ವಾಯಿತೆಂದು ಪಾಂಡವರ ಸೇನೆಯವರೆಲ್ಲ ನೊಂದುಕೊಳ್ಳುವಂತಾ
ಯಿತು. ಆದರೆ ಸೂರ್ಯನು ಪಶ್ಚಿಮಸಮುದ್ರಕ್ಕೆ ಇಳಿಯುವದಕ್ಕೆ
ದಾರಿಯೇ ಇಲ್ಲದಂತೆ ಅರ್ಜುನನು ಆಕಾಶವನ್ನೆಲ್ಲ ತನ್ನ ಬಾಣಗಳಿಂದ
ತುಂಬಿದನು. ಈ ಬಾಣಗಳು ಹಗೆಗಳ ಕಡೆಯವರನ್ನೆಲ್ಲ ನೆಲಕ್ಕೊರಗಿ
ಸಿದವು. ಅರಸರ ಗತಿಯೆಲ್ಲ ಮಣ್ಣುಮುಕ್ಕುವಂತಾಯಿತು. ವಂಗ,
ಕಳಿಂಗ, ಭೋಜ, ಮಾಗಧ, ಚೋಳ— ಇವರನ್ನೆಲ್ಲ ರಣಬಲಿಗೊಟ್ಟು
ಮುಂದೆ ನುಗ್ಗಿ ಅರ್ಜುನನು ಸಂಜೆಯ ಹೊತ್ತಿಗೆ ಸೈಂಧವನಿಗೆ ಇದಿ
ರಾದನು.

ಈ ನಡುವೆ ಧರ್ಮರಾಯನು ಅರ್ಜುನನ ಸಮಾಚಾರವನ್ನು ತಿಳಿ
ಯಬೇಕೆಂದು ಸಾತ್ಯಕಿಯನ್ನೂ ಭೀಮನನ್ನೂ ಹಗೆಗಳ ದಂಡಿನ ಕಡೆಗೆ
ಅಟ್ಟಿದನು. ಅವರಿಬ್ಬರೂ ದಾರಿಯಲ್ಲಿ ದ್ರೋಣನನ್ನು ಮೂಲೆಗೆ
ಕೂಡಿಸಿ ಸಿಂಹನಾದವನ್ನು ಮಾಡುತ್ತ ದಂಡನ್ನೆಲ್ಲ ತಲ್ಲಣಗೊಳಿಸುತ್ತ
ಬರುತ್ತಿರಲು ಭೂರಿಶ್ರವನೂ ಕರ್ಣನೂ ಅವರನ್ನು ತಡೆದರು. ಭೂರಿ
ಶ್ರವನೂ ಸಾತ್ಯಕಿಯೂ ಹೋರಾಡಿ ತಮ್ಮ ತೇರುಗಳನ್ನೂ ಗಾಡಿಯ
ವರನ್ನೂ ಬಿಲ್ಲುಗಳನ್ನೂ ನೀಗಿಕೊಂಡು ಪಟ್ಟಸವೆಂಬ ಆಯುಧವನ್ನು

ಹಿಡಿದು ಹೆಣಗಿದರು. ಆಗ ಭೂರಿಶ್ರವನು ಸಾತ್ಯಕಿಯನ್ನು ನೆಲಕ್ಕೆ ಕೆಡವಿ ಅವನ ಸೊಕ್ಕನ್ನೆಲ್ಲ ಕಕ್ಕಿಸುವಂತೆ ಅವನನ್ನು ಕಾಲಿನಿಂದ ತುಳಿಯುತ್ತಿದ್ದನು. ಇವನ್ನು ಕಂಡು ಕೃಷ್ಣನು ಅರ್ಜುನನಿಗೆ ಸನ್ನೆಮಾಡುತ್ತಲೆ ಭೂರಿಶ್ರವನು ಸಾತ್ಯಕಿಯನ್ನು ಕೊಲ್ಲುವದಕ್ಕಾಗದಂತೆ ಅರ್ಜುನನು ತನ್ನ ಬಾಣದಿಂದ ಭೂರಿಶ್ರವನ ಕೈಯನ್ನು ಕತ್ತರಿಸಿದನು. ಇದರಿಂದ ಕೌರವರೆಲ್ಲ ನಾಚಿಕೆಗೀಡಾದರು. ದೂರದಿಂದ ತನ್ನನ್ನು ಹೊಡೆದದ್ದು ಅಧರ್ಮವೆಂದು ಭೂರಿಶ್ರವನು ಕೃಷ್ಣನೆದುರಿಗೇ ಅರ್ಜುನನನ್ನು ಜರಿದು ಯುದ್ಧಭೂಮಿಯಲ್ಲಿಯೇ ದರ್ಭೆಯ ಮೇಲೆ ಮಲಗಿದನು.

ದುಃಶಾಸನನ ತಮ್ಮಂದಿರು ಕರ್ಣನ ಬೆಂಬಲದಿಂದ ಸೊಕ್ಕಿ ಬಾಣಗಳ ಸುರಿಮಳೆಯನ್ನು ಕರೆಯುತ್ತಿದ್ದದ್ದನ್ನು ಕಂಡು ಅವರನ್ನು ಮುಗಿಸಬೇಕೆಂದು ಭೀಮನು ತನ್ನ ಗದೆಯನ್ನು ಎಂಟು ದಿಕ್ಕುಗಳಲ್ಲಿಯೂ ತಿರುಗಿಸುತ್ತ ಬಂದನು. ಅವರೆಲ್ಲರೂ ಬಸಿರಿನಲ್ಲಿ ಹೊಕ್ಕಿದ್ದಾಗ ಬಹುಕಾಲ ಹುಟ್ಟದೆ ಒಳಗೇ ಇದ್ದದ್ದನ್ನು ನೋಡಿ ಗಾಂಧಾರಿಯು ಅವರು ಹೊರಗೆ ಬರಲೆಂದು ತನ್ನ ಹೊಟ್ಟೆಯನ್ನು ಕಲ್ಲಿನಿಂದ ಕುಕ್ಕಿದ್ದಳು. ಆ ಪೆಟ್ಟು ತಿಂದಿದ್ದ ತಲೆಗಳ ಮೇಲೆ ಭೀಮನು ತನ್ನ ಗದೆಯಿಂದ ಮಟ್ಟಿ ಅವರೆಲ್ಲರನ್ನೂ ಒಟ್ಟಿಗೆ ಸ್ವರ್ಗಕ್ಕೆ ಕಳುಹಿಸಿ ತೊಂಬತ್ತೆಂಟು ಜನ ಅಪ್ಸರಸ್ತ್ರೀಯರನ್ನು ಏಕಕಾಲದಲ್ಲಿ ವಿರಗಿತ್ತಿಯರನ್ನಾಗಿ ಮಾಡಿದನು. ಭೀಮನ ಬಾಣದಿಂದ ಕರ್ಣನ ಕುದುರೆಗಳೂ ತೇರುಗಳೂ ಗಾಡಿಯವರೂ ಬಿಲ್ಲುಗಳೂ— ಎಲ್ಲವೂ ಮಾಯವಾದವು. ಆಗ ಭೀಮನು ಭೂರಿಶ್ರವನ ಕಾಲ ಧೂಳಿಯಿಂದ ಎದೆಯೆಲ್ಲ ಮಣ್ಣಾಗಿದ್ದ ಸಾತ್ಯಕಿಯೊಡನೆ ಅರ್ಜುನನ ಬಳಿಗೆ ಬಂದನು.

ಇನ್ನು ಸೈಂಧವನ ತಲೆಯನ್ನಿಳಿಸುವದಕ್ಕೆ ಸಮಯವೆಂದು ಅರ್ಜುನನಿಗೆ ಎಚ್ಚರಗೊಟ್ಟು ಕೃಷ್ಣನು ತನ್ನ ಚಕ್ರದಿಂದ ಸೂರ್ಯನನ್ನು ಮರೆಮಾಡಿ ಸುಳ್ಳುಸಂಜೆಯನ್ನು ಮಾಡಿದನು. ಸೂರ್ಯನು ಮುಳುಗಿದನೆಂದು ದಂಡಿನವರೆಲ್ಲ ತಪ್ಪುತಿಳಿದುಕೊಂಡು ತಾವು ಆ ದಿನ

ಪಾರಾದೆವೆಂದು ಕೂಗುತ್ತಲಿ ಬದುಕಿದೆನೆಂದು ತಿಳಿದು ಸೈಂಧವನು ಅಗ್ನಿಪ್ರವೇಶವನ್ನು ಮಾಡುವ ಅರ್ಜುನನನ್ನು ನೋಡಿ ತನ್ನ ಕಣ್ಣುಗಳಿಗೆ ಹಬ್ಬವನ್ನು ಮಾಡಿಕೊಳ್ಳಬೇಕೆಂದು ತನ್ನ ತಲೆಯನ್ನು ಮೇಲಕ್ಕೆತ್ತಿದ್ದನು. ಸೂರ್ಯನನ್ನು ಮರೆಮಾಡಿದ ಸುದರ್ಶನಚಕ್ರವು ತನ್ನ ಬೆಳಕಿನಿಂದ ಅರ್ಜುನನಿಗೆ ಸೈಂಧವನನ್ನು ತೋರಿಸಿತು. ಒಡನೆ ಅವನು ಪಾಶುಪತಾಸ್ತ್ರದಿಂದ ಸೈಂಧವನ ತಲೆಯನ್ನು ಕತ್ತರಿಸಿದನು. ಸೈಂಧವನ ತಲೆಯ ಜೊತೆಗೆ ಕೌರವರ ಉತ್ಸಾಹವೆಲ್ಲ ಕತ್ತರಿಸಿಹೋಯಿತು. ಆ ಸೈಂಧವನ ಮುಂಡದಿಂದ ಚಿಗಿದ ತಲೆಯು ಸಂಜೆಯ ಅರ್ಘ್ಯವನ್ನು ಕೊಡುವದಕ್ಕೆಂದು ಹಿಡಿದಿದ್ದ ಅವನ ತಂದೆಯ ಬೊಗಸೆಯಲ್ಲಿ ಬಿತ್ತು. ಅದನ್ನು ಕಂಡು ಅವನು ಮಗನ ಸಾವನ್ನು ನೆನೆದು ನೆಲದ ಮೇಲೆ ಎಚ್ಚರದಪ್ಪಿ ಬಿದ್ದನು.

## ಘಟೋತ್ಕಚನ ಅಳಿವು

ಸೈಂಧವನ ಸಾವಿನಿಂದ ಇಮ್ಮಡಿಯಾದ ಕೋಪದಿಂದ ಕೂಡಿದ ದುರ್ಯೋಧನನು ರಾತ್ರಿಯೆಲ್ಲ ಯುದ್ಧವನ್ನು ಹೂಡಿ ರಣಭೇರಿಯನ್ನು ಹೊಡೆಸಿದನು. ಆಗ ಪಾಂಡವರು ಮನಸ್ಸಿನಲ್ಲಿ ನೆನೆಯುತ್ತಲೆ ರಾತ್ರಿಕಾಲದಲ್ಲಿ ಹತ್ತರಷ್ಟು ಹೆಚ್ಚಾಗುವ ತೋಳ ಕಸುವುಳ್ಳ ಘಟೋತ್ಕಚನು ಕಾಣಿಸಿಕೊಂಡನು. ಅವನನ್ನು ಮುಂದುಮಾಡಿ ದಂಡನ್ನು ಕಳುಹಿಸಿ ಅರ್ಜುನ ಮೊದಲಾದವರು ಹಿಂದೆ ಹೊರಟರು. ರಾತ್ರಿಯ ಯುದ್ಧದ ಚಮತ್ಕಾರಗಳಾರಂಭವಾದವು.

ಆ ಇರುಳು ದಂಡಾಳುಗಳ ಕಣ್ಣಿಗೆ ಕಗ್ಗತ್ತಲೆಯಾಗಿದ್ದರೂ ಘಟೋತ್ಕಚನು ತನ್ನ ಕೋರೆದಾಡೆಗಳ ಬೆಳಕಿನಿಂದ ಅದನ್ನು ಹಗಲಾಗಿ ಮಾಡುತ್ತ "ಎಲೊ ದ್ರೋಣನೆ, ನಿಲ್ಲು ; ಎಲೊ ದುರ್ಯೋಧನನೆ, ಬೇಗ ಓಡಿ ಹೋಗು ; ಎಲೊ ದುಃಶಾಸನ, ನಿನ್ನನ್ನು ಈ ದಿನ ಬಿಟ್ಟೇನೆ ? ಎಲೊ ಕೃಪ, ನಿನ್ನ ವಿಷಯದಲ್ಲಿ ನಾನು ಇಂದು ಕೃಪೆಯನ್ನು ತೋರಿಸಲಾರೆನು ; ಎಲೊ ಕೆಡುಕನಾದ ಕರ್ಣನೆ, ಎಲ್ಲಿದ್ದಿ ?

ಬಾ" ಎಂದು ಎದೆಯೊಡೆಯುವಂತೆ ಕೂಗುತ್ತ ಆಕಾಶದಲ್ಲಿ ಸುತ್ತಾ ಡುವದಕ್ಕೆ ಮೊದಲುಮಾಡಿದನು. ಆ ತನ್ನ ಅಟ್ಟಹಾಸದಿಂದ ಎಲ್ಲ ರನ್ನೂ ಬಣ್ಣಗೆಡಿಸುತ್ತಿರುವಂಥ ಅವನನ್ನು ನೋಡಿ ಕೆಲವರು ಹೆದರಿ ದರು; ಕೆಲವರು ಅತ್ತರು; ಕೆಲವರು ನೆಲದ ಮೇಲೆ ಧೊಪ್ಪನೆ ಬಿದ್ದರು; ಕೆಲವರು ಎಚ್ಚರದಪ್ಪಿದರು; ಕೆಲವರು ಸತ್ತರು. ಅವನನ್ನು ನೋಡಿ ರಾಜರೆಲ್ಲರೂ ತಲೆತಪ್ಪಿಸಿಕೊಳ್ಳಬೇಕೆಂದು ದಿಕ್ಕುದಿಕ್ಕುಗಳನ್ನು ಅಡರಿ ದರು. ಘಟೋತ್ಕಚನು ಹೆದರಿಕೆಯನ್ನುಂಟುಮಾಡುವ ರೂಪವನ್ನು ತಾಳಿ ಬಗೆಬಗೆಯಾದ ಆಯುಧಗಳನ್ನು ಹಿಡಿದು ಒಂದೊಂದು ವೇಳೆ ಕಾಣಿಸಿಕೊಳ್ಳುತ್ತ ಒಂದೊಂದು ವೇಳೆ ಕಾಣಿಸಿಕೊಳ್ಳದೆ ಹಗೆಗಳ ಹೆಸ ರುಳಿಯದಂತೆ ಮಾಡುತ್ತ ಬಂದನು.

"ಇವನು ಹೀಗೆಯೇ ಇನ್ನಿಷ್ಟು ಹೊತ್ತು ಕಾದಿದರೆ ನನ್ನ ದಂಡಿನ ಬಹುಭಾಗವು ಮಾತ್ರವೇ ಅಲ್ಲದೆ ಜಗತ್ತಿನ ಬಹುಭಾಗವೇ ಹೇಳುವದಕ್ಕೆ ಹೆಸರಿಲ್ಲದಂತಾದೀತು" ಎಂದು ಆ ದುರ್ಯೋಧನನು ಮನಸ್ಸಿನಲ್ಲಿ ಲೆಕ್ಕಾಹಾಕಿದನು. ಆದ್ದರಿಂದ ಏನಾದರೂ ಮಾಡಿ ಅವ ನನ್ನು ಸಾಯಬಡಿಯಿರೆಂದು ದುರ್ಯೋಧನನು ತನ್ನವರ ಬೆನ್ನುತಟ್ಟಿ ದನು. ಆಗ ಕರ್ಣನು ಅರ್ಜುನನನ್ನು ಕೊಲ್ಲಬಲ್ಲದ್ದೆಂದು ಇಂದ್ರನು ತನಗೆ ಕೊಟ್ಟಿದ್ದ ಮಹತ್ತಾದ ಶಕ್ತಿಯನ್ನು ಪ್ರಯೋಗಮಾಡಿ ಅರೆಗಳಿಗೆ ಯೊಳಗೆ ಅವನನ್ನು ನೆಲದ ಮೇಲೆ ಈಡಾಡಿದನು. ಘಟೋತ್ಕಚನ ಪ್ರಾಣವನ್ನು ಹೊರಗೆಡವಿದ ಆ ಶಕ್ತಿಯು ಮುಂದೆ ಭೀಮನ ಗದೆ ಯೊಡನೆ ಹೋರಾಡಬೇಕಾದೀತೆಂದು ಹೆದರಿ ಇಂದ್ರನ ಬಳಿಗೆ ಹೋಗಿ ಅಡಗಿಕೊಂಡಿತು. ಆಗ ಕೌರವರ ಹರ್ಷವೂ ಪಾಂಡವರ ವ್ಯಸನವೂ ನಾನು ಮುಂದು ತಾನು ಮುಂದೆಂದು ಬೆಳೆದವು.

## ದ್ರೋಣನ ಅವಸಾನ

ಮರುದಿನ ಯುದ್ಧಕ್ಕೆ ಮೊದಲು ಮಾಡುವಾಗ ದ್ರುಪದನೂ ವಿರಾಟನೂ ಬಿಲ್ಲುಗಳನ್ನು ಝೇಂಕರಿಸುತ್ತ ಎದೆಯುಬ್ಬಿಸಿಕೊಂಡು

ನುಗ್ಗಿ ಬಂದು ತಮ್ಮ ಬಾಣಗಳಲ್ಲಿ ದ್ರೋಣನನ್ನು ಹೊಳಿದರು. ದ್ರೋಣನ ಮೈಯಲ್ಲಿ ನೆಟ್ಟಿದ್ದ ಆ ಬಾಣಗಳನ್ನು ನೋಡಿದರೆ ಅವನ ಪರಾಕ್ರಮಲಕ್ಷ್ಮಿಗೆ ಆನಂದದಿಂದ ರೋಮಗಳು ಹುರಿಯೇರಿ ನಿಂತಂತೆ ಕಾಣುತ್ತಿತ್ತು. ಆ ಇಬ್ಬರೂ ಅಗ್ನಿದೇಶ್ಯನೆಂಬ ಮುನಿಯಿಂದ ತಾವು ಕಲಿತ ಚಮತ್ಕಾರಗಳನ್ನೆಲ್ಲ ಒಬ್ಬರಿಗೊಬ್ಬರು ತೋರಿಸಿದರು. ಇದರಿಂದ ಮೈ ಎಲ್ಲ ಗಾಯಗಳಾದರೂ ದ್ರೋಣನು ತನ್ನ ಕೈಚಳಕದಿಂದ ವಿರಾಟ ದ್ರುಪದರನ್ನು ಅರಗಳಿಗೆಯಲ್ಲಿ ಹದ್ದುಕಾಗೆಗಳ ಪಾಲುಮಾಡಿದನು. ಇದರಿಂದ ಪಾಂಡವರಿಗೆ ದ್ರೋಣನ ಮೇಲೆ ಹಗೆತನವು ಹೆಚ್ಚಿತು. ಅವನ ಹಣೆಯಲ್ಲಿರುವ ಗೆರೆಗಳ ಮಾತನ್ನಳಿಸುವದಕ್ಕೊಂದು ಅಳಿಮಾತ ನ್ನಾಡುವದಕ್ಕೆ ಧರ್ಮರಾಯನನ್ನು ಹೊಂಗುಟ್ಟಿಸಿ ಕೃಷ್ಣಾರ್ಜುನರು ಶಂಖವನ್ನು ಪೂರಯಿಸುತ್ತ ಮುಂದಾದರು.

ಆಗ ಧೃಷ್ಟದ್ಯುಮ್ನನ ಸೈನ್ಯವನ್ನು ನಾಶಗೊಳಿಸುವದಕ್ಕೆ ಬಂದ ಆನೆಗಳ ಹಿಂಡಿಗೆ ಭೀಮನು ಇದಿರಾಗಿ ತಲೆಯಲ್ಲಿ ರತ್ನಾಭರಣವುಳ್ಳ ದ್ದಾಗಿ ಮದಿಸಿರುವ ಅಶ್ವತ್ಥಾಮವೆಂಬ ಹೆಸರಿನ ಆನೆಯನ್ನು ಒರಗಿಸಿ ದನು. ಆಗ ಧರ್ಮರಾಯನು "ಮದಶಾಲಿಯಾದ ಮತ್ತು ರತ್ನಾಭರಣ ನಾದ ಅಶ್ವತ್ಥಾಮನ ಕೊಲೆಯಾಯಿತು" ಎಂದನು. ಅದು ಕಿವಿಗೆ ಬೀಳು ತ್ತಲೆ ದ್ರೋಣನ ಮುಖವು ಕಪ್ಪಾಯಿತು. ಮಗನು ಅಳಿದನೆಂಬ ದುಃಖ ದಿಂದಮೋಹಿತನಾಗಿ ದ್ರೋಣನು ಧನುರ್ಬಾಣಗಳನ್ನು ಕೆಳಗಿಟ್ಟು ದರ್ಭೆಯ ಮೇಲೆ ಮಲಗಿದನು. ಅವನು ತನ್ನ ತಂದೆಯನ್ನು ಕಟ್ಟಿಹಾಕಿದವನೆಂಬ ರೋಷವನ್ನು ಮನಸ್ಸಿಗೆ ತಂದುಕೊಂಡ ಧೃಷ್ಟದ್ಯುಮ್ನನು ದ್ರೋಣನ ಆ ಸ್ಥಿತಿಯನ್ನು ನೋಡಿ ಹಿಗ್ಗಿ ಇದೇ ಸಮಯವೆಂದು ಬುಸುಗುಟ್ಟುತ್ತ ಬಂದು ಒಂದು ಕೈಯಲ್ಲಿ ಕತ್ತಿಯನ್ನೂ ಇನ್ನೊಂದು ಕೈಯಲ್ಲಿ ಜುಟ್ಟನ್ನೂ ಹಿಡಿದು ಅವನ ತಲೆಯನ್ನು ಕತ್ತರಿಸಿಹಾಕಿಬಿಟ್ಟನು. ಈ ಸುದ್ದಿಯನ್ನು ಕೇಳಿ ಕೋಪಗೊಂಡ ಅಶ್ವತ್ಥಾಮನು ಹಗೆಗಳ ಮೇಲೆ ಆಗ್ನೇಯಾಸ್ತ್ರವನ್ನು ತೂರಿದನು. ಆ ಆಗ್ನೇಯಾಸ್ತ್ರಕ್ಕೆ ಹಗೆ ಗಳ ದಂಡೆಲ್ಲ ದೀಪದ ಹುಳುಗಳ ಹಿಂಡಾಯಿತು. ಆಗ ಅರ್ಜುನನು

ಬ್ರಹ್ಮಾಸ್ತ್ರವನ್ನೆಸೆದು ಆ ಆಗ್ನೇಯಾಸ್ತ್ರವನ್ನು ಆಣಗಿಸಿದನು. ಅಷ್ಟು ಹೊತ್ತಿಗೆ ಸೂರ್ಯನೂ ಬಣ್ಣಗೆಟ್ಟನು. ದ್ರೋಣ, ಸೈಂಧವ- ಮೊದಲಾದವರ ಸಾವಿನಿಂದ ದಿಕ್ಕುಗಾಣದ ದುರ್ಯೋಧನನು ಘಟೋತ್ಕಚನ ಕಲ್ಲಿನ ಮಳೆಯ ಹೊಡೆತದಿಂದ ಮುರಿದುಹೋದ ಮೂಳೆಗಳುಳ್ಳ ದಂಡಾಳುಗಳೊಡನೆ ತನ್ನ ಶಿಬಿರದ ದಾರಿಯನ್ನು ಹಿಡಿದನು.

## ಕರ್ಣನ ಉಬ್ಬಟೆ

ಮರುದಿನ ದುರ್ಯೋಧನನು ಬಂಗಾರದ ಕೊಡಗಳಿಂದ ನೀರನ್ನು ತರಿಸಿ ಕರ್ಣನಿಗೆ ದಂಡಿನ ಒಡೆಯತನದ ಪಟ್ಟವನ್ನು ಕಟ್ಟಿದನು. ಆಗ ಆದ ಭೇರಿಗಳ ಭಾಂಕಾರವು ಪರ್ವತದ ಗುಹೆಗಳಲ್ಲಿ ನಿದ್ರೆಮಾಡುತ್ತಿದ್ದ ಸಿಂಹಗಳನ್ನು ಹೊಡೆದೆಬ್ಬಿಸುವಂತೆ ಇತ್ತು. ಕರ್ಣನು ಕಾಲಪೃಷ್ಠವೆಂಬ ತನ್ನ ಬಿಲ್ಲನ್ನು ಹಿಡಿದು ತೇರನ್ನೇರಿ ಯುದ್ಧದ ಭೂಮಿಗೆ ಕಾಲಿಟ್ಟನು. ಅಷ್ಟು ಹೊತ್ತಿಗೆ ಪಾಂಡವರ ಧೃಷ್ಟದ್ಯುಮ್ನನೂ ಅಲ್ಲಿಗೆ ಬಂದಿದ್ದನು. ಇಬ್ಬರೂ ಸೇರಿದೊಡನೆ ಒಬ್ಬರನ್ನೊಬ್ಬರು ಅಟ್ಟಿಕೊಂಡು ಹೋಗುವ ಹೋರಾಟವು ನಡೆಯಿತು.

ಕರ್ಣನು ತನ್ನ ಬಿಲ್ಲಿನ ಟಂಕಾರವನ್ನು ಮಾಡುತ್ತಲೆ ಹಗೆಗಳ ಎದೆಯೊಡೆಯುವಂತೆ ಆಯಿತು.. ಅವನ ಬಾಣಗಳು ಆನೆಗಳ ತಲೆಗಳನ್ನೆಲ್ಲ ನೆಲಕ್ಕುರುಳಿಸಿದಾಗ ಆ ತಲೆಯಲ್ಲಿದ್ದ ಒಡವೆಗಳಿಂದ ಸಿಡಿದ ರತ್ನಗಳು ಸೂರ್ಯಮಂಡಲದವರೆಗೆ ಚಿಗಿಯುತ್ತಿದ್ದವು; ಮತ್ತು ಆ ಬಾಣಗಳು ಪ್ರಾಣವಾಯುವನ್ನು ಹೊರಕ್ಕೆ ಸೆಳೆಯುವ ಯಮನ ಯಂತ್ರವಾಗಿರುತ್ತಿದ್ದವು. ಕರ್ಣನ ಪರಾಕ್ರಮವನ್ನು ನೋಡಿ ಎಲ್ಲರಿಗೂ ಎದೆ ನಡುಗುತ್ತಿದ್ದರೂ ಸೂರ್ಯನಿಗೆ ಮಾತ್ರ ಉಲ್ಲಾಸವಾಗುತ್ತಿತ್ತು. ಕರ್ಣನ ಉಬ್ಬಟೆಯು ಸಂಜೆಯವರೆಗೂ ಹೀಗೆಯೇ ನಡೆಯಿತು. ಬೆಳಗಿನಿಂದ ಬಾಣಗಳನ್ನು ಹೂಡಿ ಬಿಡುವದರಲ್ಲಿ ತೊಡಗಿ ಬಗ್ಗಿಕೊಂಡೇ ಇದ್ದ ಅವನ ಬಿಲ್ಲು ಸಂಜೆಯಾಗುತ್ತಲೆ ನೆಟ್ಟಗೆ ನಿಂತುಕೊಂಡಿತು.

ಆ ದಿನ ಹಗೆಗಳ ಪೆಟ್ಟಿನ ಗಾಯವೇನೇನೂ ಆಗದೆ ಇರುವ ಕುರು ಸೇನೆಯು ಕರ್ಣನನ್ನು ಕಣ್ಣು ತುಂಬ ನೋಡುತ್ತ ನಡೆಯಲು ದುರ್ಯೋಧನನ ಕಿರುಬೆರಳನ್ನು ಹಿಡಿದು ಕರ್ಣನು ಜಯಘೋಸದಿಂದ ತನ್ನ ಶಿಬಿರವನ್ನು ಹೊಕ್ಕನು.

ಮರುದಿನ ಯುದ್ಧಕ್ಕೆ ಹೊರಡುವಾಗ ತನಗೆ ಶಲ್ಯನು ಸಾರಥಿಯಾದರೆ ಅನುಕೂಲವೆಂದು ಕರ್ಣನು ದುರ್ಯೋಧನನ ಕಿವಿಯೊಳಗೆ ಊದಿದನು. ಅದಕ್ಕೊಪ್ಪಿ ದುರ್ಯೋಧನನು ಶಲ್ಯನ ಬಳಿಗೆ ಬಂದನು. ತನ್ನನ್ನು ಗಾಡಿಹೊಡೆಯುವ ಕೆಲಸಕ್ಕೆ ಕರೆದದ್ದನ್ನು ಕೇಳಿ ಶಲ್ಯನ ಹೊಟ್ಟೆಯಲ್ಲಿ ಬೆಂಕಿ ಬಿತ್ತು. ದುರ್ಯೋಧನನು ತನ್ನ ಸಿಹಿಮಾತುಗಳಿಂದ ಶಲ್ಯನ ಕೋಪವನ್ನಿಳಿಸಿ ಅವನನ್ನು ಆ ಕೆಲಸಕ್ಕೆ ಹೊಂಗುಟ್ಟಿಸಿದನು. ಅದರಂತೆ ಶಲ್ಯನು ಕುದುರೆಗಳನ್ನು ಹೂಡಿದ ತೇರನ್ನು ತಂದು ನಿಲ್ಲಿಸಿದನು. ಕರ್ಣನು ಮೈಯುಬ್ಬಿನಿಂದ ಅದನ್ನೇರಿದನು. ಕುರು ಸೇನೆಯೆಲ್ಲ ಹಿರಿಹಿರಿ ಹಿಗ್ಗಿತು. ಹಗೆಗಳಿಗೆ ಮಾತ್ರ ಕಣ್ಣುಕತ್ತಲೆ ಇಟ್ಟಿತು. ವೀರನಾದ ಕರ್ಣನು ಆಕಾಶವೆಲ್ಲ ತುಂಬುವಂತೆ ತನ್ನ ಶಂಖವನ್ನು ಪೂರಯಿಸಿದನು.

ಕೈಚಳಕವನ್ನಾರಂಭಿಸುವದಕ್ಕೆ ಮೊದಲು ಕರ್ಣನು ಶಲ್ಯನನ್ನು ಕುರಿತು "ಎಲೈ ಶಲ್ಯನೆ, ನೋಡು ನೋಡು; ನೀನು ಗಾಡಿಯನ್ನು ನಡೆಸುವ ಚಮತ್ಕಾರವನ್ನು ನೋಡಿ ನೋಡಿ ಕೃಷ್ಣನು ನಾಚಿಕೊಂಡು ತಲೆಯನ್ನು ಬಗ್ಗಿಸಿಕೊಂಡಿದ್ದಾನೆ. ಇನ್ನು ಅರ್ಜುನನ ಪರಾಕ್ರಮವೆಂಬ ಬೆಂಕಿಯನ್ನು ನನ್ನ ತೋಳ ಬಲದಿಂದ ಹೊರಡುವ ಬಾಣಗಳ ಬಿರುಮಳೆಯು ಅರೆಗಳಿಗೆಯಲ್ಲಿ ಆರಿಸಿ ತಣ್ಣಗೆ ಮಾಡುವದು"– ಎಂದು ತನ್ನ ಜಂಭವನ್ನು ಕೊಚ್ಚಿಕೊಂಡನು. ಈ ಮಾತುಗಳು ಕಿವಿಗೆ ಬೀಳುತ್ತಿರುವಾಗಲೆ ಶಲ್ಯನಿಗೆ ಧರ್ಮರಾಯನು ತನ್ನನ್ನು ಕೇಳಿಕೊಂಡಿದ್ದ ವಿಷಯದ ನೆನಪಾಯಿತು. ಆಗ ಅವನು ಕರ್ಣನ ಎದೆಯ ಕೆಚ್ಚನ್ನು ಆಕಾಶದಲ್ಲಿ ಹಾರಿ ಹೋಗುವ ಹತ್ತಿಯನ್ನಾಗಿ ಮಾಡುವದಕ್ಕಾಗಿ "ಎಲೈ ಕರ್ಣನೆ, ಹಿಂದೆ ವಿರಾಟನಗರದ ಹತ್ತಿರ ನಡೆದ ಕದನದಲ್ಲಿ ಅರ್ಜುನನ ತೇರನ್ನು

ನಡೆಸುತ್ತಿದ್ದ ಉತ್ತರನು ಬಂದು ನಿನ್ನ ಕಣ್ಣುಗಳನ್ನು ಕಿತ್ತರೂ ಎಚ್ಚರ
ವಾಗದಷ್ಟು ನಿನಗೆ ನಿದ್ರೆ ಹೇಗೆ ಚೆನ್ನಾಗಿ ಬಂತು? ಕಾಡಿನಲ್ಲಿದ್ದ ನಿನ್ನ
ಗೆಳೆಯನಾದ ದುರ್ಯೋಧನನನ್ನು ಚಿತ್ರಸೇನನು ಎಳೆದು ಕಟ್ಟಿದಾಗ
ನೀನು ಯಾವ ಪೊದೆಯಲ್ಲಿ ಅಡಗಿಕೊಂಡಿದ್ದೆ? ಹತ್ತಿರದಲ್ಲಿದ್ದ ಬಿದಿರು
ಮೆಳೆಗಳ ತೂತುಗಳಿಂದ ಹೊರಟ ಶಬ್ದವು ನಿನಗೆ ಹೆದರಿಕೆಯನ್ನುಂಟು
ಮಾಡಲಿಲ್ಲವೆ? ದ್ರೌಪದಿಯ ಮದುವೆಯ ಸಮಯದಲ್ಲಿ ಅವಳನ್ನು
ಎತ್ತಿಕೊಂಡು ಹೋಗಬೇಕೆಂದು ಕೌರವರೊಡನೆ ಒಟ್ಟುಗೂಡಿದ ನಿನ್ನ
ತಲೆಯ ಪಿತ್ತವೆಲ್ಲ ಆಗಲೆ ಅರ್ಜುನನಿಂದ ಚೆನ್ನಾಗಿ ಇಳಿದಿದ್ದರೂ
ಮತ್ತೆ ಹೇಗೆ ಚಿಗುರಿಕೊಂಡೆ? ಅರ್ಜುನನೊಡನೆ ಎಣೆಸುವದಕ್ಕೆ
ಈಶ್ವರನೊಬ್ಬನೆ ತಕ್ಕವನೇ ಹೊರತು ಉಳಿದವರಿಲ್ಲ ಅವನ ಮುಂದೆ
ಹುಲ್ಲಿಗಿಂತ ಕಡೆ" ಎಂದು ಉತ್ತರವನ್ನು ಕೊಟ್ಟನು. ಹೀಗೆ ಶಲ್ಯನು
ಅರ್ಜುನನ ಪಕ್ಷಪಾತಿಯಾಗಿರುವದನ್ನು ನೋಡಿ ಕರ್ಣನು ಹೆಚ್ಚು
ಮಾತಾಡದೆ ಸಮಯಕ್ಕೆ ತಕ್ಕ ಹಾಗೆ ತಾನು ಬಂದ ಕೆಲಸವನ್ನು
ಮಾಡುವದಕ್ಕೆ ತೊಡಗಿದನು.

## ದುಶ್ಶಾಸನನ ಕಡೆಗಾಲ

ನೋಡುವವರಿಗೆ ಕೂಡ ಎದೆಯೊಡೆಯುವಂತೆ ಇದ್ದ ಆ ಯುದ್ಧ
ದಲ್ಲಿ ಹಗೆಗಳನ್ನು ಮತ್ತಷ್ಟು ಹೆದರಿಸುವಂತೆ ದುಶ್ಶಾಸನನು ಸಿಟ್ಟಿನಿಂದ
ಕೆಂಪೇರಿದ ಕಣ್ಣುಳ್ಳವನಾಗಿ ಹುಬ್ಬನ್ನು ಗಂಟುಹಾಕಿಕೊಂಡು ಹಗೆ
ಗಳಿಗೆ ಎಣೆಸಿಕೊಂಡನು. ಅವನ ಸಿಂಹನಾದವು ಹಗೆಗಳನ್ನು ತಬ್ಬಿಬ್ಬು
ಮಾಡಿತು. ಅವನು ಚಕ್ರದಂತೆ ಸುತ್ತುತ್ತ ತನ್ನ ಕೈಮೆಯನ್ನು ಮೆರೆ
ಸುವದಕ್ಕೆ ಮೊದಲುಮಾಡಿದನು. ಭೀಮನಿಗೆ ಕಾಣಿಸಿಕೊಳ್ಳಬೇ
ಕೆಂಬ ಉಬ್ಬಟೆ ಹೆಚ್ಚಾಗಿ ಅವನು ಎತ್ತರವಾದ ಪ್ರದೇಶಗಳನ್ನು ಹತ್ತಿ
ಭೀಮನನ್ನು ನೋಡುವದಕ್ಕಾಗಿ ತನ್ನ ದೃಷ್ಟಿಯನ್ನು ಹತ್ತು ಕಡೆಗೂ
ಹರಿಸುತ್ತಿದ್ದನು. ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಅದನ್ನು

ತಿರುಗಿಸುತ್ತ ಕಾಲಾಳು, ಕುದುರೆ, ಆನೆ- ಮೊದಲಾದವುಗಳನ್ನೆಲ್ಲ ನುಚ್ಚುನುರಿಮಾಡಿ ರಕ್ತದ ಮಡುಗಳನ್ನುಂಟುಮಾಡುತ್ತ ಆ ದುಶ್ಶಾಸನನು ಭೀಮನ ಕಣ್ಣಿಗೆ ಬಿದ್ದನು. ಇಬ್ಬರೂ ಗಂಡುಗಚ್ಚೆಗಳನ್ನು ಕಟ್ಟಿಕೊಂಡು ಭಯಂಕರವಾಗಿ ಹೋರಾಡಿದರು. ಉಳಿದ ಕೌರವರೆಲ್ಲ ಎರಡು ಕಣ್ಣುಗಳನ್ನೂ ತುಂಬ ತೆರೆದುಕೊಂಡು ನೋಡುತ್ತಿರಲು ಭೀಮನು ಅವನ ಮೇಲೆ ವಿಷವನ್ನು ಕಕ್ಕುತ್ತ ಬಂದು ಅವನನ್ನು ಕೆಡವಿ ಅವನ ಕೆನ್ನೆಯ ಮೇಲೆ ತನ್ನ ಕೈ ಒಡಮೂಡುವಂತೆ ಹೊಡೆದು ಅವನ ಹೊಟ್ಟೆಯ ಮೇಲೆ ತನ್ನ ಗೆಲುವಿನ ಹಬ್ಬದ ಕುಣಿತವನ್ನು ಕುಣಿದನು. ಅಷ್ಟಕ್ಕೇ ಬಿಡಲಿಲ್ಲ. ತನ್ನ ಹೆಂಡತಿಯ ಮುಂದಲೆಗೆ ಕೈಹಾಕಿದ್ದ ಆ ಪಾಪಿಯ ಎದೆಯನ್ನು ಸೀಳಿ ಭೀಮನು ಆ ರಕ್ತವನ್ನು ತಾನೂ ಕುಡಿಯುತ್ತ ಪಿಶಾಚಗಳಿಗೂ ಉಣಬಡಿಸಿದನು. ಅವನು ಬಿರಿಯಹೊಯ್ದಿದ್ದ ದ್ರೌಪದಿಯ ತಲೆಯನ್ನು ಭೀಮನು ಅವನ ರಕ್ತದಿಂದ ಲೇಪನವನ್ನು ಮಾಡಿ ಅವನ ಹಲ್ಲುಗಳ ಬಾಚಣಿಗೆಯಿಂದ ಬಾಚಿ ಮುಡಿಯನ್ನು ಕಟ್ಟಿದನು.

## ಕರ್ಣನ ಹಣೆಯ ಬರೆಹವು ತೀರಿದ್ದು

ಆಮೇಲೆ ಹಗೆಗಳನ್ನೆಲ್ಲ ಹುಲ್ಲಿನಂತೆ ಕಡೆಗಂಡು ರಣರಂಗದಲ್ಲೆಲ್ಲ ತಾನೇ ತಾನಾಗಿ ಗುಡುಗಾಡುತ್ತಿದ್ದ ವೃಷಸೇನನನ್ನು ಅರ್ಜುನನು ಗೋಲೋಕಕ್ಕೆ ಕಳುಹಿಸಿದನು. ತನ್ನ ಮಗನಿಗೆ ಈ ಗತಿಯಾದದ್ದನ್ನು ಕೇಳಿ ಕರ್ಣನು ರೇಗಿ ಹುಲಿಯು ಜಿಂಕೆಗಳ ಮಂದೆಯಲ್ಲಿ ನುಗ್ಗುವಂತೆ ಪಾಂಡವರನ್ನೆಲ್ಲ ತಿಂದು ತೇಗಿಬಿಡಬೇಕೆಂದು ಮುಂದೆ ಬಂದನು. ಬಾಣವನ್ನು ಹೂಡಿ ಬಿಡುವ ಕೆಲಸದಲ್ಲಿ ಆ ದಿನ ಕರ್ಣನ ಕೈ ತನ್ನ ಚಾತುರ್ಯವನ್ನೆಲ್ಲ ತೋರಿ ಮುಗಿಸಿತು. ಅವನ ಬಾಣಗಳ ಪೆಟ್ಟಿನಿಂದ ಪಾಂಡವರ ಕಡೆಯವರ ಮೈ ಎಲ್ಲ ರಕ್ತದಿಂದ ನೆನೆದು ಹೋಯಿತು. ಕರ್ಣನ ತೇರಿನ ಭರವನ್ನು ನೋಡುತ್ತಲೆ ಶ್ರೀಕೃಷ್ಣ

ನಿಗೆ ಕೂಡ ಎದೆ ನಡುಗಿತು; ಮೈ ಬೆವರಿಟ್ಟಿತು; ಕೈಯಿಂದ ಚಾಟಿ ಜಾರಿಹೋಯಿತು. ಕರ್ಣನಿಗೂ ಅರ್ಜುನನಿಗೂ ಕೈಕೈ ಕೂಡಿತು. ಇಬ್ಬರ ಕೋಪವೂ ಮುಗಿಲುಮುಟ್ಟಿತು. ಅರೆಗಳಿಗೆಯೊಳಗೆ ಇಬ್ಬರೂ ಮೈ ಎಲ್ಲ ಗಾಯಗೊಂಡವರಾದರು. ಅವರಿಬ್ಬರ ಬಾಣಗಳು ಆಕಾಶ ದಲ್ಲಿ ಕಟ್ಟಿದ ಮೇಲುಕಟ್ಟಿನಂತೆ ಇರುತ್ತಿದ್ದವು. ಕೆಲವು ಹೊತ್ತು ಯುದ್ಧವಾದ ಮೇಲೆ ಕರ್ಣನು ಸರ್ಪಾಸ್ತ್ರವನ್ನು ಕೈಗೆ ತೆಗೆದು ಕೊಂಡನು. ಒಡನೆ ಇಂದ್ರನು ತನಗೆ ಅರ್ಜುನನೆಂಬೊಬ್ಬ ಮಗನೂ ಇರುವನೆಂಬ ಅಭಿಪ್ರಾಯವನ್ನು ದೂರಮಾಡಿದನು. ಕರ್ಣನಿಂದ ಹೊರಟ ಸರ್ಪಾಸ್ತ್ರವು ಅರ್ಜುನನನ್ನು ಎರಡು ತುಂಡು ಮಾಡುತ್ತೇ ನೆಂದು ಆಣೆಮಾಡಿ ಹೇಳುತ್ತಿರುವಂತೆ ಎರಡು ನಾಲಿಗೆಗಳನ್ನು ಮುಂದಕ್ಕೆ ಚಾಚಿಕೊಂಡು ಬಂತು. ಆ ಹೊತ್ತಿಗೆ ಸರಿಯಾಗಿ ಶ್ರೀಕೃಷ್ಣನು ತನ್ನ ತೇರಿನ ಗಾಲಿಯು ಅಚ್ಚಿನವರೆಗೆ ಹೂತು ಹೋಗುವಂತೆ ಮಾಡಿ ದನು. ಆದ್ದರಿಂದ ಆ ಸರ್ಪವು ತಾನು ಬಂದ ಭರದಲ್ಲಿ ಅರ್ಜುನನ ಕಿರೀಟವನ್ನು ಮಾತ್ರ ಹಾರಿಸಿಕೊಂಡು ಹೋಯಿತು. ಆಗ ಇಂದ್ರ ನಿಗೆ ಧೈರ್ಯವು ಬಂತು. ಅಷ್ಟರಲ್ಲಿ ಆ ಸರ್ಪಾಸ್ತ್ರವು ಅರ್ಜುನನ ತಲೆ ಯನ್ನೇ ಹಾರಿಸುವದಕ್ಕೆಂದು ಮತ್ತೆ ಬರುತ್ತಿರುವಾಗ ಅರ್ಜುನ ನಲ್ಲಿದ್ದ ತಕ್ಷಕನ ಬಾಣವು ಹೊರಟು ಆ ಸರ್ಪಾಸ್ತ್ರವನ್ನು ತುಂಡು ಮಾಡಿ ಹಾಕಿತು. ಆಮೇಲೆ ಅರ್ಜುನನು ಕೃಷ್ಣನ ಸೂಚನೆಯಂತೆ ಕರ್ಣನ ಮೇಲೆ ಬಗೆಬಗೆಯಾದ ಬಾಣಗಳನ್ನು ಬಿಟ್ಟನು. ಕೊನೆಗೆ ದಾನಮಾಡುವವರಲ್ಲಿ ಹೆಸರುಹೊಂದಿದ್ದ ಕರ್ಣನು ತನ್ನ ಬಳಿಗೆ ಬಂದ ಬಾಣಗಳಿಗೆ ತನ್ನ ಪ್ರಾಣವನ್ನೇ ಕೊಟ್ಟು ತನ್ನ ಹೆಸರುವಾಸಿಯನ್ನು ಳಿಸಿಕೊಂಡನು. ಕರ್ಣನು ಹೀಗೆ ಕೊನೆಗಂಡ ಸುದ್ದಿಯನ್ನು ಕೇಳಿ ದುರ್ಯೋಧನನು ದುಃಖವೆಂಬ ಸಮುದ್ರದ ತಳಾಪಿಡಿದನು. ತನ್ನ ಮಗನಾದ ಕರ್ಣನ ಕೊನೆಗಾಲವನ್ನು ನೋಡಿದ ಸೂರ್ಯನು ಬಣ್ಣಗೆಟ್ಟ ವನಾಗಿ ತನ್ನ ಮೈಲಿಗೆಯನ್ನು ಕಳೆದುಕೊಳ್ಳುವದಕ್ಕಾಗಿ ಸಮುದ್ರ ದಲ್ಲಿ ಮುಳುಗಿದನು.

## ದುರ್ಯೋಧನನ ಆಟವು ಮುಗಿದದ್ದು

ಕರ್ಣನ ಹೆಣೆಯು ಬರೆಹವು ಅಳಿಸಿ ಹೋದ ಮೇಲೆ ದುರ್ಯೋಧನನು ಶಲ್ಯನನ್ನು ದಂಡಿನ ಒಡೆಯನನ್ನಾಗಿ ಮಾಡಿ ಇನ್ನು ತಾನು ಜಯಭೇರಿಯನ್ನು ಹೊಡೆಸುವೆನೆಂದು ತಿಳಿದುಕೊಂಡನು. ಅನೇಕರ ತಲೆಗಳನ್ನೆಲ್ಲ ಚೆಂಡಾಡಿದ ಶಲ್ಯನು ಧರ್ಮರಾಯನ ಕೈಯಿಂದ ಬಂದ ಬಾಣದಿಂದ ನೊಂದು ಆಯಾಸವನ್ನು ಕಳೆದುಕೊಳ್ಳುವದಕ್ಕಾಗಿ ಮತ್ತೆ ಏಳದಂತೆ ರಣರಂಗದಲ್ಲಿಯೇ ಹಾಯಾಗಿ ಮಲಗಿದನು. ತೋಳ ಬಲವನ್ನು ಬೆಳೆಸಿಕೊಂಡಿದ್ದ ನಕುಲನು ಶಕುನಿಯ ಮೇಲೆ ಕಾಣಿಸಿಕೊಂಡು ಅವನನ್ನು ಯಮನ ಹಗ್ಗದ ಕಟ್ಟಿಗೆ ಒಳಪಡಿಸಿದನು. ಸಹದೇವನ ಹೋರಟೆಯೂ ತಡೆಯಿಲ್ಲದೆ ಸಾಗುತ್ತಿತ್ತು. ಅರ್ಜುನನ ಆರ್ಭಟದಿಂದಲಂತು ಅಶ್ವತ್ಥಾಮ, ಕೃಪ – ಮೊದಲಾದವರೂ ಬಾಯಲ್ಲಿ ಬೆಟ್ಟಿಟ್ಟುಕೊಂಡರು.

ದುಶ್ಶಾಸನ ಮೊದಲಾದವರೆಲ್ಲ ಹೀಗೆ ಸಾಲಾಗಿ ರಣರಂಗಕ್ಕೆ ತಲೆಕೊಟ್ಟದ್ದನ್ನು ನೋಡಿ ದುರ್ಯೋಧನನ ಮನಸ್ಸು ಅಳುಕಿತು. ಇನ್ನು ತಾನು ಎಲ್ಲಿಯಾದರೂ ತಲೆತಪ್ಪಿಸಿಕೊಂಡು ಅಡಗಿಕೊಳ್ಳುವದೇ ಉತ್ತಮವೆಂದು ಅವನಿಗೆ ತೋರಿತು. ಒಡನೆ ಅವನು ಮುಖಕ್ಕೆ ಮುಸುಕುಹಾಕಿಕೊಂಡು 'ತ್ವರಿತ'ವೆಂಬ ಒಂದು ಮಡುವಿನ ಬಳಿಗೆ ಬಂದು ಅದರ ತಳದವರೆಗೆ ಮುಳುಗಿದನು. ಒಳಗೆ ಮುಳುಗಿರುವದರಿಂದ ತನಗೆ ಎಷ್ಟು ಮಾತ್ರವೂ ಆಯಾಸವೆನಿಸದಂತೆ ನೀರನ್ನು ತಡೆದಿಡುವ ವಿದ್ಯೆಯು ಅವನಿಗೆ ಗೊತ್ತಿತ್ತು.

ದುರ್ಯೋಧನನು ಗುಹೆಗಳಲ್ಲಿಯೋ ದೊಡ್ಡ ಊರುಗಳಲ್ಲಿಯೋ ಅಡವಿಯಲ್ಲಿಯೋ ದಟ್ಟವಾದ ಪೊದೆಯಲ್ಲಿಯೋ ಅಡಗಿಕೊಂಡಿರಬಹುದೆಂದು ಅವನನ್ನು ಹುಡುಕುವದಕ್ಕಾಗಿ ಭೀಮನು ರಣಾಂಗಣದಿಂದ ಹೊರಟನು. ಅವನ ಅಣ್ಣತಮ್ಮಂದಿರೂ ಅವನಿಗೆ ನೆರವಾಗಿ ಹೊರ

ಟರು. ಅವರು ಹೋಗುತ್ತಿರುವಾಗ ದಾರಿಯಲ್ಲಿ ಅರ್ಜುನನಿಗೆ ಒಬ್ಬ ಬೇಡನು ಕಾಣಿಸಿಕೊಂಡನು. ಅವನನ್ನು ವಿಚಾರಿಸಿದಾಗ ಅವನು ರಾಜಲಕ್ಷಣಗಳುಳ್ಳ ದುರ್ಯೋಧನನ ಹೆಜ್ಜೆಯ ಗುರ್ತುಗಳನ್ನು ಬಹು ವಿನಯದಿಂದ ಅರ್ಜುನನಿಗೆ ತೋರಿಸಿದನು. ಆ ಹೆಜ್ಜೆಯ ಗುರ್ತು ಗಳು ಅವರನ್ನು ಆ ಮಡುವಿಗೆ ಕರೆದುಕೊಂಡು ಹೋದವು. ಅಲ್ಲಿ ನೆಟ್ಟಿಲ ಮೇಲೆ ನಿಂತು ಭೀಮನು ದುರ್ಯೋಧನನನ್ನು ಕುರಿತು ಹುಟ್ಟಿದಾಗ ಇಟ್ಟಿದ್ದ ಬಜೇಬೆಣ್ಣೆಯು ಕೂಡ ಮೇಲಕ್ಕೆದ್ದು ಬರು ವಷ್ಟು ಹೊಟ್ಟೆಯಲ್ಲಿ ತಳಮಳವನ್ನುಂಟುಮಾಡುವಂಥ ಚುಚ್ಚುವ ಮಾತುಗಳಿಂದ ಕರೆದನು. ಒಳಗಿದ್ದ ದುರ್ಯೋಧನನು ಅದನ್ನು ಕೇಳಿ ನಿಟ್ಟುಸಿರಿಟ್ಟು ಮೇಲಕ್ಕೆದ್ದು ಬಂದು ಭೀಮನೊಡನೆ ಗದಾ ಯುದ್ಧಕ್ಕೆ ನಿಂತನು.

ಕುರುಕ್ಷೇತ್ರದ ಯುದ್ಧಾರಂಭವಾಗುವದಕ್ಕೆ ಮುಂಚೆಯೇ ತೀರ್ಥಯಾತ್ರೆಗೆಂದು ಹೋಗಿದ್ದ ಬಲರಾಮನು ಈ ಹೊತ್ತಿಗೆ ಸರಿ ಯಾಗಿ ಅಲ್ಲಿಗೆ ಬಂದನು. ಅವನೂ ನೋಡುತ್ತಿರಲು ಭೀಮನೂ ದುರ್ಯೋಧನನೂ ಗದಾಯುದ್ಧಕ್ಕೆ ಮೊದಲುಮಾಡಿದರು. ಕುಂಬಾರನ ಚಕ್ರದಂತೆ ಅವರು ಗರಗರ ಸುತ್ತುತ್ತಿದ್ದಾಗ ಅವರ ಗುರ್ತನ್ನು ಬಲರಾಮನಾಗಲಿ ಕೃಷ್ಣನಾಗಲಿ ಧರ್ಮರಾಯ ಮೊದಲಾದವರಾಗಲಿ ದೇವತೆಗಳಾಗಲಿ ಗಂಧರ್ವರಾಗಲಿ ಚಾರಣರಾಗಲಿ ಯಾರೂ ತಿಳಿಯ ಲಿಲ್ಲ. ಕೆಲವು ಹೊತ್ತು ಯುದ್ಧವು ನಡೆದ ಮೇಲೆ ಕೃಷ್ಣನು ಮಾಡಿದ ಸನ್ನೆಯನ್ನರಿತು ಭೀಮನು ತನ್ನ ಗದೆಯನ್ನು ದುರ್ಯೋಧನನ ಎರಡು ತೊಡೆಗಳ ಮೇಲೆಯೂ ಹೇರಿದನು. ಅದರಿಂದ ಅವನ ತೊಡೆಗಳು ಚೂರುಚೂರಾದವು. ಒಡನೆ ತಾರಕಾಸುರನನ್ನು ಗೆದ್ದ ಷಣ್ಮುಖ ನಂತೆ ಕೃಷ್ಣನಿಂದ ಕೂಡಿದ ಪಾಂಡವರು ಆರುಮುಖಗಳಿಂದಲೂ ಶಂಖಧ್ವನಿಯನ್ನು ಮಾಡಿ ಹೊತ್ತು ಮುಳುಗುವ ಸಮಯಕ್ಕೆ ಬಿಬಿರ ವನ್ನು ಹೊಕ್ಕರು.

## ಅಶ್ವತ್ಥಾಮನ ಹಾವಳಿ

ಅಷ್ಟು ಹೊತ್ತಿಗೆ ದುರ್ಯೋಧನನನ್ನು ಹುಡುಕಿಕೊಂಡು ಬರುತ್ತಿದ್ದ ಅಶ್ವತ್ಥಾಮನು ರಣರಂಗದಲ್ಲಿ ಅವನು ಕುಟುಕುಜೀವದಲ್ಲಿರುವದನ್ನು ಕಂಡನು. ಇನ್ನಾದರೂ ತಾನು ಕಾರ್ಯಸಾಧನೆಯನ್ನು ಮಾಡದೆ ಬಿಡೆನೆಂದು ದುರ್ಯೋಧನನ ಕಿವಿಗೆ ಒಂದೆರಡು ಸಮಾಧಾನದ ಮಾತನ್ನು ಹೇಳಿ ಅವನ ಸಮ್ಮತಿಯನ್ನು ಪಡೆದು ಧನುಸ್ಸನ್ನು ಹಿಡಿದು ಹೊರಟ ಅಶ್ವತ್ಥಾಮನು ದಾರಿಯಲ್ಲಿಯೇ ಧೃಷ್ಟದ್ಯುಮ್ನನನ್ನು ಕತ್ತರಿಸಿ ರಾತ್ರಿಯಲ್ಲಿಯೇ ಉಪಪಾಂಡವರನ್ನೆಲ್ಲ ಕೊಂದು ಭಯಂಕರವಾದ ತನ್ನ ಬಾಣಗಳಿಂದ ಹಗೆಗಳ ದಂಡನ್ನೆಲ್ಲ ಪುಡಿಪುಡಿಮಾಡಿ ಕೃಪನನ್ನೂ ಕೃತವರ್ಮನನ್ನೂ ಕೂಡಿಕೊಂಡು ಮಡುವಿನ ಬಳಿಗೆ ಬಂದು ನಡೆದ ಸಂಗತಿಯನ್ನೆಲ್ಲ ಹೇಳಿದನು. ಅದನ್ನೆಲ್ಲ ಕೇಳಿ ಅವನನ್ನು ಬಾಚಿ ತಬ್ಬಿಕೊಂಡು 'ನೀನೇ ನನ್ನ ಪ್ರಾಣ'ವೆಂದು ಹೇಳುತ್ತಿರುವಾಗಲೇ ದುರ್ಯೋಧನನ ಪ್ರಾಣಗಳು ಅವನ ದೇಹವನ್ನು ಬಿಟ್ಟು ಹೊರಬಿದ್ದವು.

ಆಮೇಲೆ ಕೃಪನು ಹಸ್ತಿನಾಪುರಕ್ಕೂ ಕೃತವರ್ಮನು ದ್ವಾರಕಿಗೂ ಅಶ್ವತ್ಥಾಮನು ವ್ಯಾಸರ ತಪೋವನಕ್ಕೂ ಹೊರಟುಹೋದರು. ಬೆಳಕು ಹರಿದ ಮೇಲೆ ಧೃಷ್ಟದ್ಯುಮ್ನನ ತೇರನ್ನು ನಡೆಸುತ್ತಿದ್ದವನು ತನ್ನೊಡೆಯನ ತಂಗಿಯಾದ ದ್ರೌಪದಿಗೆ ಉಪಪಾಂಡವರ ಕೊಲೆಯ ವಿಚಾರವನ್ನು ತಿಳಿಸಿದನು. ಅದು ಅವಳಿಗೆ ಕಾಲಕೂಟವಾಗಿ ಮೂರ್ಛೆಯನ್ನುಂಟುಮಾಡಿತು. ಉಪಪಾಂಡವರನ್ನು ಕೊಂದ ಅಶ್ವತ್ಥಾಮನನ್ನು ಹಿಡಿಸುತರುವದಕ್ಕೆಂದು ಅರ್ಜುನ ಮೊದಲಾದವರು ತೇರನ್ನೇರಿ ಹೊರಟರು. ಭೀಮನು ಅವರೆಲ್ಲರಿಗಿಂತ ಮುಂದಾಗಿದ್ದನು. ತನ್ನ ಆಶ್ರಮಕ್ಕೆ ಬಂದು ಭೀಮ ಮೊದಲಾದವರು ಬಾಣಗಳನ್ನು ಸುರಿಸುತ್ತಲೆ ಅಶ್ವತ್ಥಾಮನು 'ಈ ದಿನ ಭೂಮಿಯು ಪಾಂಡವರಿಲ್ಲದ್ದಾಗಲಿ' ಎಂದು ಶಪಿಸಿ 'ಇಷೀಕಾ' ಎಂಬ ಅಸ್ತ್ರವನ್ನು ತನ್ನ ತಪಶ್ಶಕ್ತಿಯೊಡನೆ ಬಿಟ್ಟನು. ಆಗ ಅರ್ಜುನನು ಕಳುಹಿದ 'ಬ್ರಹ್ಮಶಿರಸ್' ಎಂಬ ಅಸ್ತ್ರದಿಂದ ಆ 'ಇಷೀಕಾ'ಅಸ್ತ್ರವು ಮೂಗುಮುಚ್ಚಿಕೊಂಡು ಮೂಲೆಯಲ್ಲಿ ಮುದುರಿ

ಕೊಂಡಿತು. ಆಗ ಭೀಮನು ಅಶ್ವತ್ಥಾಮನ ತಲೆಯಲ್ಲಿದ್ದ ಹುಟ್ಟು ಮಣಿಯನ್ನು ಕಿತ್ತುಕೊಂಡು ಬಂದು ದ್ರೌಪದಿಗೆ ಕೊಟ್ಟು ಅವಳ ದುಃಖವನ್ನು ಕಡಿಮೆಮಾಡಿದನು.

## ಧೃತರಾಷ್ಟ್ರನ ಗೋಳು

ಈ ಯುದ್ಧವೆಲ್ಲ ಮುಗಿಯುವ ಹೊತ್ತಿಗೆ ಧೃತರಾಷ್ಟ್ರನಿಗೆ ತನ್ನ ಹೊಟ್ಟೆಯಲ್ಲಿ ಹುಟ್ಟಿದವರಲ್ಲಿ ದುಶ್ಶಲಾ ಎಂಬೊಬ್ಬಳೂ ತನ್ನ ತಮ್ಮ ನಾದ ಪಾಂಡುವಿನ ಐವರು ಮಕ್ಕಳೂ ಮಾತ್ರ ಉಳಿದಿರುವರೆಂದು ತಿಳಿಯಿತು. ಇದುವರೆಗೆ ಕಣ್ಣು ಮಾತ್ರ ಇಲ್ಲದಿದ್ದ ಅವನು ಈಗ ಚೇತನವೂ ಇಲ್ಲದವನಾದನು. ಆಗ ವಿದುರನೂ ಸಂಜಯನೂ ಅವ ನನ್ನು ಬೀಸಣಿಗೆಗಳಿಂದ ಬೀಸಿ ಉಪಚರಿಸಿದರು. ಆಗ ಎಚ್ಚರವು ಬರು ತ್ತಲೆ ಅವನು 'ದುರ್ಯೋಧನ! ದುಶ್ಶಾಸನ!' ಎಂದು ಕಲ್ಲು ಕರಗು ವಂತೆ ಗೋಳಾಡುತ್ತ ತನ್ನ ಬಂಧುಗಳೊಡನೆ ಊರ ಹೊರಕ್ಕೆ ಬಂದು ತನ್ನ ಪ್ರಾಣಗಳೂ ಹೋಗಲೆಂದು ಎದೆಯನ್ನು ಬಡಿದುಕೊಳ್ಳುತ್ತ ಕಣ್ಣೀರುಸುರಿಸಿದನು. ಗಾಂಧಾರಿಯು ಸೊಸೆಯರೊಡನೆ ತಲೆ ಯನ್ನು ಬಿರಿಯಹೊಯ್ದುಕೊಂಡು ಮಕ್ಕಳನ್ನು ನೆನೆನೆನೆದು ಬಿಕ್ಕಿ ಬಿಕ್ಕಿ ಅಳುವದಕ್ಕಾರಂಭಿಸಿದಳು. ಆ ಹೆಂಗಸರ ಗೋಳಾಟಗಳಲ್ಲೆಲ್ಲ ಭೀಮನ ಗದೆಯನ್ನು ನಿಂದಿಸುವ ಮಾತುಗಳೇ ತುಂಬಿ ತುಳುಕುತ್ತಿ ದ್ದವು. ಇವರೆಲ್ಲರಿಂದ ಕೂಡಿ ಧೃತರಾಷ್ಟ್ರನು ರಣರಂಗಕ್ಕೆ ಬಂದು ನೋಡಿದಾಗ ತನ್ನವರೆಲ್ಲರೂ ಉಸಿರಾಡದೆ ಸಾಲುಸಾಲಾಗಿ ಮಲಗಿ ದ್ದರು. ಎಲ್ಲರೂ ಅವರ ಮೇಲೆ ಸುತ್ತಲೂ ಹೊರಳಾಡುತ್ತ ತಮ್ಮ ರೋದನಧ್ವನಿಯಿಂದ ಹತ್ತು ದಿಕ್ಕುಗಳನ್ನೂ ತುಂಬಿದರು.

ಮಕ್ಕಳ ಸಾವಿನಿಂದ ಹೊಟ್ಟೆಯಲ್ಲಿ ಉರಿಯೆದ್ದಿರುವ ದೊಡ್ಡಪ್ಪ ನಿಗೆ ಕಾಣಿಸಿಕೊಳ್ಳುವದು ಹೇಗೆಂದು ಧರ್ಮರಾಜನು ತಲೆಯ ಮೇಲೆ ಕೈ ಹೊತ್ತದ್ದನ್ನು ನೋಡಿ ಶ್ರೀಕೃಷ್ಣನೂ ವ್ಯಾಸರೂ ಧೃತರಾಷ್ಟ್ರನ ಬಳಿಗೆ ಬಂದು ಕಾಡುಕಿಚ್ಚಿನಿಂದ ಸುಡುತ್ತಿರುವ ಅಡವಿಯ ಮರಗಳನ್ನು

ಮಳೆಗಾಲವು ತಣ್ಣಗೆ ಮಾಡುವಂತೆ ಅವನನ್ನು ಶಾಂತಗೊಳಿಸಿದರು. ಆಮೇಲೆ ಧರ್ಮರಾಯನು ಬಂದು 'ದೊಡ್ಡಪ್ಪ, ಎಲ್ಲ ಬಗೆಯ ತಪ್ಪುಗಳನ್ನೂ ಮಾಡಿ ನಿನ್ನ ಶಾಪಕ್ಕೆ ಪಾತ್ರ ಅರ್ಹನಾದ ನಾನು ಬಂದಿದ್ದೇನೆ' ಎಂದೆರಗಿದನು. ಧೃತರಾಷ್ಟ್ರನು ಅವನನ್ನು ಸಮಾಧಾನದಿಂದ ಬರಮಾಡಿಕೊಂಡನು. ಆಮೇಲೆ ಮುಂದಾಗುವದನ್ನು ತಿಳಿದಿದ್ದ ಕೃಷ್ಣನು ಉಕ್ಕಿನಿಂದ ಮಾಡಿದ ಭೀಮಸೇನನನ್ನು ಮುಂದುಮಾಡುತ್ತಲೇ ಅದು ಢಗ್ಗೆಂದು ಉರಿದು ಕರಗಿ ಹೋದುದರೊಂದಿಗೆ ಅವರ ವೈರವೂ ಕರಗಿಹೋಯಿತು. ಇದೆಲ್ಲ ಆದ ಮೇಲೆ ಭಗೀರಥನು ತನ್ನ ಹಿರಿಗೆಲ್ಲ ಉತ್ತರಕ್ರಿಯೆಯನ್ನು ಮಾಡಿದಂತೆ ಧರ್ಮರಾಯನು ತನ್ನ ಜ್ಞಾತಿಗಳಿಗೆಲ್ಲ ಗಂಗಾಜಲದಿಂದ ತರ್ಪಣೋದಕಗಳನ್ನು ವಿಧಿಪ್ರಕಾರವಾಗಿ ಕೊಟ್ಟನು.

## ಧರ್ಮರಾಯನ ಪಟ್ಟಾಭಿಷೇಕ

ಧರ್ಮರಾಯನು ತನ್ನ ತಮ್ಮಂದಿರೊಡನೆ ಕೃಷ್ಣನನ್ನು ಮುಂದುಮಾಡಿಕೊಂಡು ಪುರಪ್ರವೇಶಕ್ಕೆ ಹೊರಟನು. ಮಂಗಲವೆಂಬ ಸಮುದ್ರದ ಅಲೆಗಳಂತೆ ತೋರಣಗಳೂ ವಾದ್ಯಗಳ ಧ್ವನಿಗಳೂ ಪಟ್ಟಣದಲ್ಲೆಲ್ಲ ಹರಡಿಕೊಂಡವು. ಹೀಗೆ ಒಳ್ಳೆ ವೈಭವದಿಂದ ಧರ್ಮರಾಯನು ಊರನ್ನು ಹೊಕ್ಕನು. ಧರ್ಮರಾಯನು ಅಲ್ಲಿ ದೊಡ್ಡಪ್ಪನ ಮನೆಯಲ್ಲಿ ಒಂದು ದಿನವಿದ್ದು ಮರುದಿನ ತನ್ನ ಮನೆಯನ್ನು ಸೇರಿದನು. ಕೃಷ್ಣನೇ ಮೊದಲಾದವರು ಧರ್ಮರಾಯನ ತಲೆಯಲ್ಲಿ ಬಂಗಾರದ ಕಿರೀಟವನ್ನಿಟ್ಟರು. ಧರ್ಮರಾಯನು ಸಿಂಹಾಸನವನ್ನು ಹತ್ತುವ ಸಮಯದಲ್ಲಿ ಶ್ರೀಕೃಷ್ಣನು ವ್ಯಾಸರೊಡನೆಯೂ ಸಂಜಯನೊಡನೆಯೂ ಮಾತಾಡುತ್ತ ಮುಂದೆ ನಿಂತನು. 'ಯುಯುತ್ಸು' ಎಂಬುವನು ವಿನಯಪೂರ್ವಕವಾಗಿ ಧರ್ಮರಾಯನ ಕೈಹಿಡಿದನು. ಆಮೇಲೆ ಅವನಿಗೆ ಆನೆಯ ಮೇಲೆ ಅಂಬಾರಿಯಲ್ಲಿ ಮೆರವಣಿಗೆ ನಡೆಯಿತು. ರಾತ್ರಿಯ ಮೊದಲನೆ

ಯಾಮದ ಚಂದ್ರಮಂಡಲದಂತೆ ಬಿಳೀ ಕೊಡೆಯು ಶೋಭಿಸಿತು. ಎರಡು ಕಡೆಯ ಚಾಮರಗಳು ಹಂಸಪಕ್ಷಿಗಳಂತೆ ಕಂಗೊಳಿಸುತ್ತಿದ್ದವು. ಪಟ್ಟಣದ ಹೆಂಗಸರೆಲ್ಲ ಉಪ್ಪರಿಗೆಗಳ ಮೇಲೆ ನಿಂತು ಅರಳಿನ ಮಳೆಯನ್ನು ಸುರಿದರು. ಹೀಗೆ ಧರ್ಮರಾಯನು ಗ್ರಾಮಪ್ರದಕ್ಷಿಣೆಯನ್ನು ಮಾಡಿ ಬಂದು ತನ್ನ ಮನೆಯ ಬಾಗಿಲಿನಲ್ಲಿಳಿದನು. ಬಂಗಾರದ ತಟ್ಟೆಗಳಲ್ಲಿ ದೀಪಗಳನ್ನಿಟ್ಟುಕೊಂಡು ಹೆಂಗಸರು ಆರತಿಯನ್ನು ಮಾಡಿದರು. ಸುಗಂಧದ್ರವ್ಯಗಳಿಂದ ಘಮಘಮಿಸುತ್ತಿದ್ದ ಮಂಟಪದಲ್ಲಿ ಧರ್ಮರಾಯನು 'ಸರ್ವತೋಭದ್ರ'ವೆಂಬ ಸಿಂಹಾಸನವನ್ನು ಹತ್ತಿದನು.

ಆಮೇಲೊಂದು ದಿನ ಧರ್ಮರಾಯನು ತನ್ನ ಗೆಳೆಯರೊಡನೆ ತನ್ನ ಅರಮನೆಯನ್ನು ಹತ್ತಿ ಬಹುಕಾಲದಿಂದ ತನ್ನ ಕಣ್ಣಿಗೆ ಮರೆಯಾಗಿದ್ದ ಆ ಪಟ್ಟಣದ ಬಾವಿಗಳನ್ನೂ ಬೀದಿಗಳನ್ನೂ ತೋಟಗಳನ್ನೂ ಕುಣಿತದ ಮನೆಗಳನ್ನೂ ನೋಡಿದನು. ಭೀಮನೇ ಮೊದಲಾದವರನ್ನು ಜೊತೆಯಲ್ಲಿಯೇ ಕರೆದುಕೊಂಡು ನೂರು ಜನ ಮಕ್ಕಳನ್ನು ಕಳೆದುಕೊಂಡು ಸಂತಾಪ ಪಡುತ್ತಿರುವ ದೊಡ್ಡಪ್ಪನನ್ನೂ ಜೊತೆಗೆ ಸೇರಿಸಿಕೊಂಡು ಧರ್ಮರಾಯನು ಪ್ರತಿದಿನವೂ ಭೀಷ್ಮರ ಬಳಿಗೆ ಹೋಗುತ್ತಿದ್ದನು. ಭೀಷ್ಮರು ಪರಲೋಕಕ್ಕೆ ಹೋಗುವ ಸನ್ನಾಹದಲ್ಲಿ ಪರ್ಣಿಯ ಮೇಲೆ ಮಲಗಿದ್ದರು. ಆ ಭೀಷ್ಮರಿಂದ ಧರ್ಮರಾಯನು ವರ್ಣಾಶ್ರಮಗಳ ಧರ್ಮಗಳನ್ನೆಲ್ಲ ಚೆನ್ನಾಗಿ ಕೇಳಿ ಕೇಳಿ ತಿಳಿದುಕೊಂಡನು. ಧರ್ಮರಾಯನು ಆಳುವಾಗ ಲಂಕೆಯಿಂದ ಮೊದಲುಮಾಡಿಕೊಂಡು ಹಿಮವತ್ಪರ್ವತದವರೆಗಿನ ಸರ್ವಸಂಪತ್ತೂ ಅವನ ಕೈಸೇರಿತು. ಶ್ರೀಕೃಷ್ಣನ ಬೆಂಬಲವನ್ನು ಹೊಂದಿ ಧರ್ಮರಾಯನು ಅನೇಕ ನಿಯಮಗಳನ್ನು ಹಿಡಿದು ಸಮನಿಲ್ಲವೆನಿಸುವಂಥ ಅಶ್ವಮೇಧಯಾಗವನ್ನು ಮಾಡಿದನು. ಧರ್ಮರಾಯನ ಆಳಿಕೆಯಲ್ಲಿ ತೆರಪಿಲ್ಲದಂತೆ ಅಧೀನ ರಾಜರು ಬಂದು ಅವನ ಪಾದದ ಮೇಲೆ ಕಿರೀಟದಿಂದ ಕೂಡಿದ ತಮ್ಮ ಹಣೆಗಳನ್ನಿಡುತ್ತಿದ್ದರು. ದಾನವನ್ನು ಕೊಡುವದಕ್ಕಾಗಿ ಅವನು ಯಾವಾಗಲೂ ಕೈಯಲ್ಲಿ ನೀರನ್ನು ಹಿಡಿದೇ ಇರುತ್ತಿದ್ದನು. ಅವನ

ಬುದ್ಧಿಯಲ್ಲಿ ಹಿಂದೆ ಎಂದೂ ಕಾಣದ ಮತ್ತು ಕೇಳದ ರಾಜನೀತಿ ಕೌಶಲಗಳು ಹೊರಹೊಮ್ಮುತ್ತಿದ್ದವು. ಅವನ ಹೃದಯದಲ್ಲಿ ಕರುಣಾರಸವು ತುಂಬಿತುಳುಕುತ್ತಿತ್ತು. ಅವನ ನಾಲಿಗೆಯಲ್ಲಿ ಸತ್ಯವು ನಲಿದಾಡುತ್ತಿತ್ತು. ಅವನ ತೋಳುಗಳಲ್ಲಿ ಭೂದೇವಿಯು ಹಾಯಾಗಿ ವಿಹರಿಸುತ್ತಿದ್ದಳು. ಹೀಗೆ ಆವನು ಬಹುಕಾಲ ಜನರನ್ನು ಕಾಪಾಡುತ್ತಿದ್ದನು.

ಜಯ ಶ್ರೀಕೃಷ್ಣ ಭಗವನ್ !

---



